# ಕೋಗಿಲೆ

(ಕವಿತೆ)

---

ಡಿ. ಆರ್. ರಾಮಯ್ಯ, ಬಿ. ಎ.

---



ಒಕ್ಕಲಿಗರ ಸಂಘ ಪ್ರೆಸ್,
ಬೆಂಗಳೂರು ಸಿಟಿ.

1931

# ಅರ್ಪಣೆ

ವಿಶ್ವವಿದ್ಯಾಧಿಷ್ಠಾನ ದೇವತೆಯ ವಿಮಲ ತೇಜೋಬಲದಿಂದ,
ಮಾನವಜನ್ಮದ ನಿರಂತರ ಸ್ವಾತಂತ್ರ್ಯ ಸಂಗ್ರಾಮದಲ್ಲಿ,
ಈಶ, ದೇಶ, ಭಾಷೆ, ಪ್ರಜೆ ಎಂಬ ಚತುರಂಗಗಳಿಗೆ
ತನು ಮನ ಧನವ ತೆತ್ತು ಮೆರೆವ
ಸತ್ಯಸೇವಕರ ಶಾಂತಿವ್ರತಕ್ಕೆ—

ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್ ಭಾಷಾ ವಿಶಾರದರೂ,
ಕನ್ನಡ ವಿದ್ವಾಂಸರೂ ಆದ

**ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ,** ಎಂ. ಎ., ಬಿ. ಎಲ್.

ಇವರ

# ಮುನ್ನುಡಿ

---

ಮ|| ರಾ|| ಡಿ. ಆರ್. ರಾಮಯ್ಯನವರ ಕವನಗಳನ್ನು ಓದಿ ಸಂತೋಷಪಟ್ಟೆನು. ಕವಿತಾರಚನೆ ಚೆನ್ನಾಗಿದೆ. ಕನ್ನಡದ ಸೇವೆಯಲ್ಲಿ ಇವರು ಬಹಳ ಉತ್ಸಾಹಶಾಲಿಗಳಾಗಿದ್ದಾರೆ; ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆ. ಸರಸ್ವತೀ ದೇವಿಯ ಪ್ರಸಾದವನ್ನು ಸಂಪೂರ್ಣವಾಗಿ ಪಡೆದು, ಇವರು ಕನ್ನಡಿಗರ ವಿಶ್ವಾಸ ಗೌರವಗಳಿಗೆ ಅರ್ಹರಾಗಲೆಂದು ನಾನು ಮನಃಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

**ಬೆಂಗಳೂರು** **ಬಿ. ಎಂ. ಶ್ರೀಕಂಠಯ್ಯ.**
26—1—'31.

# ಅರಿಕೆ

ಕವಿತಾರಾಮಕ್ಕೆ ಮೇರೆಯಿಲ್ಲ; ಅಲ್ಲಿರುವ ಕೋಗಿಲೆಗಳಿಗೂ ಪಾರವಿಲ್ಲ; ಈ ಕೋಗಿಲೆಗಳ ಅಭಿರುಚಿಗೂ ಅಂತರವಿಲ್ಲ! ಹೀಗೆ ಅನಾದಿಸಿದ್ಧವೂ, ಅಭಿನ್ನವೂ ಆದ ಕವಿತಾಮಾನಿನಿಯ ದಿವ್ಯಸನ್ನಿಧಿಯಲ್ಲಿ—ಕನ್ನಡ ದೇವಿಯ ಸುಗ್ಗಿಯ ಸಗ್ಗದಲ್ಲಿ—ಎಂತಹ ಕೋಗಿಲೆಯಾದರೂ ಕೂಗಲೇ ಬೇಕು.

೧೯೨೦ ರಿಂದ ಇದುವರೆಗೆ ವಿದ್ಯಾಭ್ಯಾಸದ ವಿರಾಮದಲ್ಲಿ ರಚಿಸಿದ ಚಿಕ್ಕ ಕವಿತೆಗಳನ್ನು ಮಾತ್ರ ೭ ಭಾಗಗಳಾಗಿ ವಿಂಗಡಿಸಿ, ಆಧ್ಯಾತ್ಮಿಕ, ವರ್ಣನೀಯ, ಭಾವಪ್ರಕಾಶಿಕ, ಬೋಧನೀಯ ಸಂಮಿಶ್ರಿತವಾಗಿ ಒಪ್ಪುವ ಕೆಲವನ್ನು ವಾಚಕರಿಗೆ ಒಪ್ಪಿಸಿದೆ. ರೆಕ್ಕೆ ಬಲಿವಾಗ ಅಳುಕಿ ಬಳುಕಿ ಹಾರುವ ಪುಟ್ಟಹಕ್ಕಿಯಂತೆ, ದೀನತೆಯಿಂದ ಇದೂ ಹೊರಟಿತು.

ಈ ಕವಿತೆಯಲ್ಲಿ ಅಚ್ಚಗನ್ನಡ ಛಂದಸ್ಸು ಭಾವಕ್ಕೆ ತಕ್ಕ ಪ್ರಭೇದದಿಂದ ಪ್ರಯೋಗವಾಗಿದೆ. ಸಾಧ್ಯವಾದ ಕಡೆ ಪ್ರಾಸಬದ್ಧವಾಗಿದೆ. ಓದುವಾಗ ಹೊಸ ಧಾಟಿ ಇರಬೇಕು.

ಮುನ್ನುಡಿ ಬರೆದ 'ಶ್ರೀ' ಯವರಿಗೂ, ಹಲವು ಕವಿತೆಗಳನ್ನು 'ಪ್ರಬುದ್ಧ ಕರ್ಣಾಟಕ', 'ಸರಸ್ವತಿ', 'ನವಜೀವನ', 'ಒಕ್ಕಲಿಗರ ಪತ್ರಿಕೆ', 'ಲೋಕಹಿತೈಷಿ' ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟಿಸಿದ ದಯಾಶೀಲರಾದ ಸಂಪಾದಕರಿಗೂ, ಈ ಪುಸ್ತಕವನ್ನು ಮುದ್ದಾಗಿ ಮುದ್ರಿಸಿದ ಒಕ್ಕಲಿಗರ ಸಂಘದ ಮುದ್ರಾಲಯದ ಕಾರ್ಯಕರ್ತರಿಗೂ ಕಬ್ಬಿಗನ ಅನಂತ ವಿನಂತಿ.

67 / 3. ಶಂಕರಪುರ,
ಬಸವನ ಗುಡಿ ಪೋಸ್ಟ್, **ಡಿ. ಆರ್. ರಾಮಯ್ಯ**
ಬೆಂಗಳೂರು ಸಿಟಿ.
31—1—'31.

# ಸೂಚನೆ

೫



೬



೭





ಓಂ

# ಕೋಗಿಲೆ

— ೧ —

## ವಿಶ್ವವಿದ್ಯಾ ಮಾತೃಮಂದಿರಕ್ಕೆ

ಮನ್ನಣೆಯಿಂ ಬಾಳೆಮ್ಮಯ ತಾಯೆ !
ಸನ್ನುತೆ, ವಿದ್ಯಾಮಂದಿರೆ, ಮಾಯೆ !

ಭೌತಿಕಶಾಸ್ತ್ರದ ಜಯ ಜನನಿ !
ರಸವರ್ಗದ ಪೊಸ ಪೊಂಭರಣಿ !
ಸಸ್ಯ, ಶಿಲಾ, ಖಗ, ಮೃಗದ ಗಣಿ !
ಗಣಿತವ ಗಣಿಸುವ ವಿಜಯಮಣಿ !
ಮಂಜುಳ ಸಾಹಿತ್ಯದ ಸಿರಿ ನೀನು !
ಅಣುರೇಣುಗಳಲಿ ನೆಲೆಸಿರುವೆ !

ಕೆಂಪಿನ ವಸನವ ನೀನುಟ್ಟು,
ಗೋಪುರದಾಭರಣವ ತೊಟ್ಟು,
ಸೊಂಪಿನ ಸಿಸುಗಳಿಗೆದೆಗೊಟ್ಟು,
ತಂಪಿನ ಶಾಂತಿಯ ಸುಧೆಯಿತ್ತು,
ನಗರದ ನಾಲ್ದೆಸೆಗೆಸೆದಿಹ ಜನನೀ !
ನಗುನಗು ನಾಕದ ನವ ತರುಣಿ !

ಗುರುಜನರೊಳು ನೆರೆ ನಲಿದಾಡಿ,
ಸರಸದೊಳೆಮ್ಮಯ ಬಳಿಯಾಡಿ,

ನಿರುತದಿ ಮನದೊಳು ಸುಳಿದಾಡಿ,
ವರ ವಿಜ್ಞಾನದ ಬೆಳೆಮಾಡಿ,
ಲೋಕವನಾಳುವ ಶಕ್ತಿಯು ನೀನು
ಶ್ರೀಕರ ಭಾವದೊಳೊಪ್ಪುತಿಹೆ !

ನಿನ್ನಯ ಮಾಯೆಯ ಸಿಕ್ಕಿನಲಿ,
ಬಿನ್ನಣದಿಂದಲಿ ತೊಡರುತಲಿ,
ಸನ್ಮತಿಯಾಂತರು ನಾಡಿನಲಿ,
ಚೆನ್ನಿಗರೆನಿತೋ ಸುಖಿಸುತಲಿ !
ಹುಟ್ಟದ, ಅಳಿಯದ ವಸ್ತುವು ನೀನು
ಕಂಡೂ ಕಾಣದೆ ಮೆರೆದಿರುವೆ !

ಬೆಳೆವೆವು ಸಾಹಸ ಶಕ್ತಿಯಲಿ;
ನಲಿವೆವು ನಿನ್ನಯ ನೋಹಿಯಲಿ!
ನಿಲುವೆವು ಕನ್ನಡ ನಾಡಿನಲಿ;
ಗಳಿಸಿದ ಶಾಶ್ವತ ಕೀರ್ತಿಯಲಿ ;
ಮೂಡಲ ಪಡುವಲ ಬಟ್ಟೆಯು ಬೆಳಕೇ !
ರೂಢಿಯೊಳೆಲ್ಲೆಡೆ ಚಲಿಸುತಿಹೆ !

ನಮ್ಮಯ ವಿದ್ಯೆಗೆ ನೆಲೆಯಾದೆ !
ನಮ್ಮಯ ಬುದ್ಧಿಗೆ ಗಣಿಯಾದೆ !
ನಮ್ಮಯ ನಾಡಿಗೆ ಸಿರಿಯಾದೆ !
ನಮ್ಮಯ ಮುಕ್ತಿಗೆ ಮಣಿಯಾದೆ !
ಉಲಿಯುವೆ, ಒಲಿಯುವೆ, ನಲಿಯುವೆ ಲಲಿತೇ!
ಚೆಲುವಿನ ವರ ವಿದ್ಯಾವನಿತೇ !

---

# ಕನ್ನಡ ಕೋಗಿಲೆ



ಕೋಗಿಲೆ ನಿನ್ನಯ ದನಿಗೇಳುತ ನಾ
ತೂಗುತೆ ನಲಿವೆನು ಸುಗ್ಗಿಯಲಿ !
ಬೇಗನೆ ಬಾ ನೀನೆಲ್ಲಿಹೆ ನಿನಗೀ
ರಾಗವ ಕಲಿಸಿದ ಗುರುವಾರು !

ಮಾಗಿಯು ಮೌನಕೆ ಬಾಗದೆ ನೀನು, ಸು
ಯೋಗಿಯು ತೆರದಲಿ ಮೆರೆದಿರುವೆ ;
ಸುಗ್ಗಿಯು ಸಗ್ಗಕೆ ಹಿಗ್ಗದೆ ನೀ ಸು
ತ್ಯಾಗಿಯು ತೆರದಲಿ ನಲಿದಿರುವೆ ;
ಮುಲೆಯುತೆ ವಾಯಸವಲ್ಪಗುಣಂಗಳಿ
ಗಲೆಯುತೆ ತಲೆಯನು ತೂಗುವುದು !
ಉಲಿಯುತೆ ನೀ ವರಗುಣಮಣಿಯಂದದಿ,
ಚಲಿಸುವೆ ಕಣ್ಣಿಗೆ ಮರೆಯಾಗಿ !

ಅರಿವೊಡೆ ಲೋಕದಿ ನಿರ್ಮಲ ಗುಣವೇ
ಗುರುತರವಲ್ಲದೆ ಪೆರತುಂಟೆ !
ಬರಿದಹ ದೇಹದ ಗಾತ್ರಕೆ ಭೀಕರ
ಗೆರಳಿನ ರಭಸಕೆ ಮತಿಯುಂಟೆ !

ಲೋಕದಿ ನಿಜನಡೆನುಡಿಯಿಂ ಕೀರ್ತಿಯ
ಪಾಕವ ಗಳಿಸುತೆ ನಿನ್ನಂತೆ,
ಏಕಸಮೂಹದಿ ಮಾನಿತನೆನಿಸುವ
ನಾಕವ ಮಿರಿದ ಸಿರಿಯುಂಟೆ !

*

# ಕೊಳಲ ಗೋಪಾಲ

(೧)

ಜಲಜನಾಭನ ಲೀಲೆಯಲಿ,
ಇನನೆದ್ದು ಮೆರೆದನು ಪೂರ್ವದಿಶೆಯಲಿ ;
ಲಲಿತೆ ಕೋಮಲೆ ಕಮಲೆ ಚಂದಿರವದನೆ ನಕ್ಕಳು ಇನಿಯ
ನನು ಕಂಡು !
ನಕ್ಕ ಕದಪನು ಮುತ್ತುತಿರೆ ತಂಗಾಳಿ, ಪಕ್ಕಿಗಳುಲಿಯೆ
ನಿಂದನು
ಉಕ್ಕುವತಿಮೋದದಲಿ ಕೊಳಲನು ಪಿಡಿದು ಗೋಪಾಲ !

ಅಲ್ಲಿ ಯಮುನಾತೀರದಲಿ,
ಕರಮೆಸೆವ ಪುಲ್ಗಳ ತೆಕ್ಕೆಯಲಿ,
ಸುಯ್ಯೆಲರು ಬೀಸಲು ಮಲಗಿದುವು ಗೋವುಗಳು ಶಾಂತಿಯಲಿ

ಬನದ ನಡುವಣ ನವಸುಮವೊ !
ಸೊಂಪೊಗೆದ ಯಮುನೆಯ ಜಲದಿ ಮಿರುಗುವ ಚಂದಿರನೊ !
ತುರುನಿವಹ ತಾರೆಯೊ !—ಪೇಳಿದೇನೆಂದು,
ಅನತಿದೂರದ ವೃಕ್ಷದಲಿ ಮೈಮರೆಸಿ ಮೆಚ್ಚುಗೆಯಿಂದೆ
ನುಡಿದುದು
ಕವಿಯ ಕೋಗಿಲೆಯು !
ಕೋಗಿಲೆಯ ನಿಡುಸರವ ನಣಕಿಪೆನೆಂಬ ಕತದಲಿ ಗೋಪ
ನೆಸೆದನು
ಚೆಂದುಟಿಯು ಕಂಪೊಗೆದ ಕಾಂತಿಯೊಳೆಸೆವ ಕೊಳಲಿನಲಿ!

(೨)

ಕೊಳಲಿನ ಮೆಲುನುಡಿಯಾಲಿಸಿ ಕೆಲದಿ,
ಲಲಿತದೊಳೆಸೆದುವು ತುರುನಿಕರ!
ಇದಿಗೋ ಬಂದರು ಮನೆಮನೆಯಿಂದೆ
ನೋಡಿರಿ ನಲಿಯುವ ಗೋಪಿಯರ !

ಬಿಚ್ಚಿದ ಮುಡಿಯನು ಕಟ್ಟದೆ ಕೆಲರು,
ಸಡಲಿದ ಸೆರಗನು ಮುಟ್ಟದೆ ಕೆಲರು,
ಕುಣಿದರು ಮಣಿದರು ಜೈಜೈಯೆನುತೆ !
ಗುಣಮಣಿಯೆಂದರು ನೆರೆಬಾಳೆನುತೆ!

ಗೋಕುಲಬಾಲನ ಸಿರಿಗಾಗಿ,
ಸ್ತ್ರೀಕುಲವಿದ್ದಿತು ಬೆರಗಾಗಿ !

(೩)

ಗೋಪಾಲನಿಂತುಲಿವ ಕೊಳಲಿಂಪ ನಾಲಿಸಲು,
ಯಮುನೆಯ್ಯೆತಂದಳಾ ತೀರವನು ಬಿಟ್ಟು !
ಅಲ್ಲೋಲಕಲ್ಲೋಲವಾದ ಜಲಕೇಳಿಯಲಿ
ಸಲ್ಲಲಿತ ಮನದೋರಿ ನಕ್ಕಳಾ ತರುಣಿ !
ಇಂತು ಸಂದಣಿಸುತಲಿ ಬಳಗದೊಡನಾಡಿ,
ನಿಂತಿರುವ ಯುವತಿಯರ ನೋಡಿ ಗೋಪಾಲ
ಕೊಳಲೂದಿದನು ; ಬಳಿಕ ಕೇಳಿತಾಕ್ಷಣವಿಂತು
ವಿಮಲ ಬ್ರಹ್ಮಾನಂದ ದಿವ್ಯ ತತ್ವವಿದು—

ಮೆಚ್ಚಿದೆನು ಯುವತಿಯರೆ,
ನಿಮ್ಮಯ ಭಕ್ತಿಹೃದಯದ ಬೆಳಕ ಮೆಚ್ಚಿದೆ !

ಮೆಚ್ಚಿದೆನು ನಿಮ್ಮತುಳ ಸೇವೆಯ ವಿಮಲ ಶಾಂತಿಯನು;
ಮೆಚ್ಚಿದೆನು ಪಶುಪಕ್ಷಿಗಳೆ;
ನಿಮ್ಮಕ್ಕರೆಯ ಭಕ್ತಿಯನು ಮೆಚ್ಚಿದೆ;
ಮೆಚ್ಚಿದೆನು ನಿಮ್ಮಮಲ ಸೇವಾತಪದ ಸಿದ್ಧಿಯನು !
ಕಾರ್ಯಶೀಲರ ನೆರೆಯೊಳಿರುವೆನು ;
ಕೊಳಲನುಡಿಸುವೆ ನವರ ಮೆಚ್ಚುವೆ;
ಕಾರ್ಯಶೀಲತೆಯದುವೆ ಜಗತೀಮಾಯೆಯಾಗಿಹುದು !—

ಎಂಬ ನುಡಿಗಳ ಕೇಳಿ ಸಡಲಿತು
ಸಂದಣಿಯು; ಸಂತವಿಸಿ ನುಡಿದುದು;

—ನಂಬಿದೆವು ಗೋಪಾಲ ನೀನಿರದೆಡೆಯದೆಲ್ಲಿಹುದು !
ನಂಬಿದೆವು ಕರ್ತವ್ಯಕರ್ಮದ
ಇಂಬಿನಲಿ ನೀನಿರುವೆ ಯೆಂಬುದ !
ಹಂಮಿನಲಿ ಮೈಮರೆವ ಜನರನು ಮೆಚ್ಚೆ ನೀನೆಂದು!

ತುಂಬು ನಿನ್ನಯ ಕೊಳಲ ಗಾನದೆ ;
ತುಂಬು ಧರೆಯಲಿ ಧರ್ಮವನು!
ನೆರೆ ನಂಬಿದೆವು ಮೈದೋರಿ ರಕ್ಷಿಸು ಯೆನುತೆ ಸಾರಿದುದು.

---

# ಮಾಯೆಯ ಮಿಂಚು



ಬೆಟ್ಟದ ಮೇಗಡೆ ಕುಳಿತಿರಲೋರ್ವನು
ನಿಟ್ಟಿಸಿ ನೋಡುತೆ ಸುಗ್ಗಿಯಲಿ,
ತಟ್ಟನೆ ಮಿಂಚಿತು; ಕಾರ್ಮುಗಿಲೆದ್ದಿತು;
ಹುಟ್ಟಿತು ಗುಡುಗಿನ ಮಾರ್ದನಿಯು!
—ಮನ
ಮುಟ್ಟಿತು ಮಿಂಚಿನ ಮಾಯೆಯದು!

ಒಡನೆಯೆ ಮಳೆಗರೆದುದು ತಂಪಾದುದು!
ಪೊಡವಿಯು ತರುಲತೆ ಚಿಗುರಿದುವು!
ಕಡುತವಕದಿ ತಾನಿಳಿದನು ಬೆಟ್ಟದ
ಬುಡದಲಿ ಕಿಬ್ಬಿಯ ಕಡೆಯಲ್ಲಿ
—ಪೊರ
ಮಡುತಿರೆ ಶತಪಥವಿಡುತಲ್ಲಿ!

ಕತ್ತಲು ಮುಸುಕಿತು, ಕುಣಿದುವು ಪೊದೆಗಳ
ಸುತ್ತಲು ಮಿಂಚಿನ ಚಿಟ್ಟೆಗಳು!
ಅತ್ತಿತ್ತಲುಗದೆ ನಿಂತನು; ಮುತ್ತುತೆ
ಬಂದುವು ತನ್ನೊಡನಾಡಿಗಳು
—ಕವಿ
ದೆತ್ತಲು ಮಿಂಚಿನ ಮುತ್ತುಗಳು!

ಹಿಂದಿರುಗುತಲವ ನರಿತನು ದೇಹದ
ಪಂಜರದಲ್ಲಿಹ ಮಿಂಚೊಂದು,
ಬಂಧನದಲಿ ಮಿಂಚಿತು ತನ್ನೆದೆಯಲಿ
ಅಂದದ ಮಾಯೆಯ ಬೆಳಕೊಂದು !

—ಬಳಿ

ಸಂದನು ಮಂದಿರದೆಡೆಗೆಂದು !

ನೆಲದಲಿ ನಭದಲ್ಲೆದೆಯಲ್ಲೀಪರಿ
ತಳತಳಿಸುವ ಮಿಂಚಿನ ಕಳೆಯ
ನೆಲೆಯನು ಕಂಡಚ್ಚರಿಯಿಂ ನೆನೆದನು
ಜಲರುಹನಾಭನ ಲೀಲೆಯನು !

—ಕಳ

ಕಳಿಸುವ ಕಾಂತಿಯ ಭಾವವನು !

ಪಾಡಿತು ರಾಗದಿ ಮನವವನೆದೆಯಲಿ !
ಮೂಡಿತು ಮಿನುಗಿತು ಸಂತಸವು !
ಕೂಡಿತು ಕುಣಿಯಿತು ಕಣ್ಣೆವೆ ಯಿಕ್ಕದೆ
ನೋಡುತೆ ಪರಮಾನಂದದಲಿ !

—ಸುಳಿ

ದಾಡುವ ಮಾಯೆಯ ಮಿಂಚಿನಲಿ !

---

## ತಿರುಕನ ತಂಬೂರಿ

ಸುಂದರಹಾಸದಿ ನಗುವುದು ನೋಡ್ಯೆ ತಿರುಕನ ತಂಬೂರಿ !
ಚೆಂದದಿ ಹಾಡನು ಹಾಡುವ ಬಾರ್‍ಯೆ ಕುರುಡನು ದನಿಗೂಡಿ !
" ಪುಣ್ಯಾತ್ಮುಲಾರಾ—ದೇವುಲು
ಪುಣ್ಯಮು ಚೇಯಂಡೀ "
ಎಂಬನು ತಿರುಕನು ಕೈನೀಡಿ !
ಎಂಬನು ಕುರುಡನು ನೆರೆಬೇಡಿ !
ಆತನ ಹಾಡದು ಎದೆಯನು ತಟ್ಟಿ
ಪ್ರೀತಿಯ ಸಲಿಸಿತು ಮನಮುಟ್ಟಿ !

ಚೆಂದಿರನಂದದ ಚೆಲುವನು ನೋಡ್ಯೆ ತಿರುಕನ ತಂಬೂರಿ !
ಅಂದದ ನುಡಿಗಳ ನುಡಿವನು ಬಾರ್‍ಯೆ ಕುರುಡನು ದನಿಮಾಡಿ !
ಬಿದಿರಿನ ತಂಬೂರಿ—ಸೋರೆಯ
ಬುರುಡೆಯ ತಂಬೂರಿ !
ತಿರುಕನ ಹಾಡದು ಸವಿಹಾಡು,
ಸ-ರಿ-ಗ-ಮ ವಿಲ್ಲದ ಬರಿಹಾಡು !
ಆತನ ಹಾಡದು ಎದೆಯನು ತಟ್ಟಿ,
ನೀತಿಯ ನೆಲೆಸಿತು ಮನಮುಟ್ಟಿ !

ಸವೆದುವು ವರುಷಗಳೆನಿತೋ ತಿರುಕನ ಮಂಜುಳ ಗಾನದಲಿ !
ಸವೆದುವು ತಂಬೂರಿಗಳಾನಂದದ ಶಾಂತಿಸಮಾಧಿಯಲಿ !
ಗಾನದಿ ತೂಗುವನು—ತಲೆಯನು
ತೂಗುತೆ ಹಾಡುವನು !

ಗಾನವೆ ತಿರುಕನ ಕಣ್ಣಾಗಿ,
ಶಾಂತಿಯೆ ದೇವರ ನೆಲೆಯಾಗಿ,
ಆತನ ಹಾಡದು ಎದೆಯನು ತಟ್ಟಿ;
ಶಾಂತಿಯ ಸೇರಿತು ಮನಮುಟ್ಟಿ!

ಮುದುಕನ ಹಾಡನು ಕೇಳಲು ನೆರೆದರು ಮೆಚ್ಚಿನ ನಾಡಿಗರು;
ಹೃದಯವು ತಣಿಯಿತು ಕಣ್ಣಲಿ ಹನಿತುವು ಆನಂದಾಶ್ರುಗಳು!
ಕರದಲಿ ಹಿಡಿದಿಹನು—ದೇವಿಯ
ನುರದಲಿ ತಬ್ಬಿಹನು!
ತಿರುಕನ ದೇಹವೆ ತಂಬೂರಿ!
ತಂಬೂರಿಯೆ ತಿರುಕನ ದಾರಿ!
ಆತನ ಹಾಡದು ಎದೆಯನು ತಟ್ಟಿ,
ಮಾತನು ಮೀರಿತು ಮನಮುಟ್ಟಿ!

ಸುಂದರಹಾಸದಿ ನಗುವುದು ನೋಡೈ ತಿರುಕನ ತಂಬೂರಿ!
ಚೆಂದದಿ ಹಾಡನು ಹಾಡುವ ಬಾರೈ ಕುರುಡನು ದನಿಮಾಡಿ!
ದೇವರ ತಂಬೂರಿ—ದೇಹವು
ಶಾಂತಿಯ ಸವಿದಾರಿ!
ಜೀವನು ಹಾಡುವ ಹಾಡನು ಕೇಳಿ,
ದೇವನು ನಲಿವನು ಶಾಂತಿಯ ತಾಳಿ!
ಹಾಡೆಲೆ ತಿರುಕನೆ ದೇಹವ ತಟ್ಟಿ!
ಹಾಡನು ಬರೆಯಿಸು ಮನಮುಟ್ಟಿ!



— ೨ —

## ತಾಯಿ ಭೂಮಿಗೆ ಬರುವಾಗ



ಆನಂದಲಹರಿಯಲಿ ಮನಮುಳುಗಿ ತೇಲುವುದು !
ಸಾನಂದ ಸೌಭಾಗ್ಯಳೀ ತಾಯಿ ಭೂಮಿ !
ಊಟ ಕೂಟಗಳೇಕೆ ! ಆಟ ಮಾಟಗಳೇಕೆ !
ತಾಳಮೇಳಗಳೇಕೆ ! ನಿದ್ರೆಯೇಕೆ !
ಎಲ್ಲಿ ನಿಲ್ಲದು ದೇಹ, ಬಾಧಿಸುತ್ತಿರೆ ಮೋಹ !
ಅಲ್ಲಿ ನವವೈಭವಕೆ ಕರೆಯುತಿರೆ ಮಾತೆ !

ನಿತ್ಯ ನಿನ್ನಯು ನೋಟದಾನಂದವಿರುವಂದು ,
ಮತ್ತರಂದದಿ ಮರೆತೆವಿಂದು ದೂರದಲಿ !
ಎತ್ತ ನೋಡಲು ತಾಯಿಭೂಮಿಯಾನನವಿಂತು
ಸುತ್ತಿ ಸೆಳೆಯುತಲಿಹುದು ಸಂತವಿಸುತಿಂದು !

ಅನ್ನ ಬಟ್ಟೆಗಳೆಂಬ ಚೆಂದದಾಸೆಗಳಿಲ್ಲ ;
ರನ್ನದುಡಿಗೆಗಳೆಂಬ ಬಯಕೆಯೆಮಗಿಲ್ಲ ;
ಅನ್ನ ಬಟ್ಟೆಗಳಿಹುವು; ರನ್ನದೊಡವೆಗಳಿಹುವು;
ಮುನ್ನ ಮಾಡಿದ ಕರ್ಮಫಲವು ಇಹುದು !
ಇನ್ನೊಂದ ಕಾಣೆವೀ ಅನ್ಯರೊಡನಾಟದಲಿ,
ಚೆನ್ನೆ ತಾಯಿಯ ಮುದ್ದು ಕೊರಳೆ ಕೂಗು !



# ತಾಯ ಹಾಲು

ಹಾಲಿನ ಕಥೆಯನು ಕೇಳುವೆನಮ್ಮಾ !
ಅಮೃತವದೆಂಬರು ಏಕಮ್ಮ !
ಹಾಲನು ಮಾರುವ ಗೌಡನು ಬರುವನು;
ಹಾಲಿನ ನೀತಿಯು ತಿಳುಹಮ್ಮ !—

—ಹಾಲನು ಪಡೆದರು ದಿವಿಜರು ಕಂದ,
ಹಿಂದಕೆ ದಾನವರನು ಜಯಿಸಿ !
ಗೋವಿನ ಹಾಲನು ಕರೆದನು ಕಂದ,
ಹಿಂದಕೆ ಗೋಪಾಲನು ಜನಿಸಿ !

ಹಾಲಿನ ಕಡಲಿನ ಮೇಗಡೆ ಬರುವನು,
ತೇಲುತೆ ನಾರಾಯಣ ಮಲಗಿ !
ಹಾಲನು ಬಯಸುವರೆಲ್ಲರು ಧರೆಯಲಿ ;
ಅದರಿಂದಾಯಿತು ಅಮೃತವದು !

ತಾಯಿಯ ಪ್ರೇಮವು ಹರಿವುದು ಕಂದ,
ಪ್ರಾಣಿಯ ಸಲಹುವ ಹಾಲಾಗಿ !
ಹೆಣ್ಣನು ಪಡೆದಿಹ ಜೀವಿಯು ಜನಿಸಿತು,
ತಣ್ಣನೆ ಹಾಲಲಿ ಸವಿಯಾಗಿ !—

—ಎಲ್ಲಾ ಹಾಲನು ಮೀರುವುದಮ್ಮಾ,
ನಿನ್ನೆದೆಯಲ್ಲಿಹ ಸವಿ ಹಾಲು !
ಎಲ್ಲಾ ಅಮೃತವ ಮರೆಸುವುದಮ್ಮ,
ತಾಯಿಯ ಮೋಹದ ತನಿವಾಲು !

---

# ಭಾರತ ಮಾತೆ



(೧)

ಭಾರತಭೂಮಿಯ ನೆರೆಯನು ಸಾರು;
ವೀರರ ಬಾಳನು ನೀ ತೋರು !
ಮೀರಿದ ದುಗುಡವ ಸಂಹರಿಸೇಳು;
ಸಾರಸ ಹೃದಯವ ಕೊಂಡಾಡು !

ಗಗನದಿ ನೆರೆದರು ಪೂರ್ವಿಕರೆಲ್ಲ
ಯುಗಯುಗಯಾತನೆಗಳು ತೀರಿ !
ಸೊಗವಿನ ಜಾಡನು ತೋರುವರೆಲ್ಲ;
ನುಗುನುಗು ವೀರರ ದನಿಗೇಳಿ !

ದಾಸ, ತಿಲಕ, ಗೋಖಲೆಯರ ನೋಡು;
ಭಾಸುರಭಾವವ ತಳೆದೇಳು !
ಭಾಸ ಮಹೋನ್ನತ ಕವಿಗಳ ನೋಡು;
ಸೂಸುತೆ ವಿನಯದಿ ನಲಿದಾಡು !

ಚೆಲುವಿನ ಆರ್ಯರ ಸೊಗವನು ಬಳಸಿ,
ನಲಿವುದು ದ್ರಾವಿಡರೋಲಗವು !
ಗೆಲುವರಾರೀ ವೀರರ ತೋಟಗೆ
ನಿಲುವರಾರೀ ಭೂತಳದಿ !

ಆರ್ಯ ದ್ರಾವಿಡದಳವನು ಕೂಡಿ,
ಸೂರ್ಯನ ರಶ್ಮಿಯ ಶಿರದಲಿ ಮೂಡಿ,

ಕಾರ್ಯ ಕುತೂಹಲ ಭರಿತಳು ತಾಯಿ
ಭಾರತಮಾತೆಯು ಕರೆಯುವಳೇಳಿ !—

(೨)

ಬನ್ನಿರಿ ಬನ್ನಿರಿ ಭಾರತಪುತ್ರರೆ !
ಉನ್ನತ ಕೀರ್ತಿಯ ಶಿಖರದಲಿ,
ನನ್ನಿಯ ತೋರುತೆ ನಲಿಯಿರಿ ಬನ್ನಿರಿ,
ಮನ್ನಣೆಯಾನುತೆ ವಿಹಿತದಲಿ !

ಭುಜಬಲ ವಾರ್ಯಪರಾಕ್ರಮವಿರಲು,
ವಿಜಯ ಪತಾಕೆಯ ದ್ರಾವಿಡರಿರಲು,
ಸೃಜಿಸಿರಿ ಸುದ್ಧಿಯ-" ಭಾರತಮಾತೆಯು
ತ್ರಿಜಗದಿ ಮೆರೆವಳು "-ಎಂಬುದನು !

ಬಿಡಿ ಬಿಡಿ ಬಿಂಕದ ಬಾಳಿನ ಜಡರ !
ಬಿಡಿ ಬಿಡಿ ದ್ರೋಹವ ಬಗೆಯುವ ಖಳರ
ತೊಡಿ ತೊಡಿ ನಾಡಿನ ವೀರರ ಕವಚ !
ತೊಡಿ ತೊಡಿ ಬಾಳಿನ ಭುಜಕೀರ್ತಿ !—

(೩)

ಭಾರತಭೂಮಿಯು, ಸತ್ಯದ ಸಗ್ಗವೆ,
ನಿತ್ಯತೆಯೊಲಿಮೆಯು, ಸೊಗವೀಡೆ,
ವೀರರ ದೇಶವೆ, ವಿನುತರ ನಾಕವೆ,
ಆಶ್ರಿತ ಭಕ್ತರ ದೇಗುಲವೆ !

ಕೇಳಿತು ನಿನ್ನಯ ವೀರನುಡಿ !
ಸೀಳಿತು ರಿಪುಗಳ ಬಗೆಗೆಡರಿ !
ಬಾಳುವೆವಮ್ಮಾ ಭಕ್ತಿಯಲಿ !
ಪಾಲಿಪೆವಾರ್ಯರ ಶಕ್ತಿಯಲಿ !

ದುರುಳರ ಭಾದೆಗೆ ಬೆದರುವರಲ್ಲ ;
ಹರಣವ ನೀವೆವು ನಿನಗಾಗಿ !
ಶರಣರ ದಾರಿಯ ಬಿಡುವವರಲ್ಲ;
ನಿರುತವು ನಿನ್ನೊಳು ನಲವಾಗಿ !

ಜಯ ಜಯ ಮಂಗಳ ಭಾರತಭೂಮಿ |
ಜಯ ಸ್ವಾತಂತ್ರ್ಯದ ಸುಪ್ರೇಮಿ !
ಜಯ ಜಯ ಆರ್ಯದ್ರಾವಿಡ ರಾಣಿ !
ಜಯ ಹೇ ಭುವನದ ಸವಿವಾಣಿ !



# ಮಹಾತ್ಮ ಕರ್ಮಯೋಗಿ

ದೇಶಸೇವೆಯ ಗೈದು, ಭರತ ಮಾತೆಯ ಕಾಯ್ದು,
ರಾಷ್ಟ್ರದಂಡವ ಕರದಿ ಪಿಡಿದು ನಡೆದು,
ಸ್ವಾತಂತ್ರ್ಯ ಕದನದಲಿ ಹೋರಾಡಿ ಬಳಲಿದರು,
ವರ ಮಹಾತ್ಮರು ಗಾಂಧಿ ವೀರವರರು !
ಭರತಮಾತೆಯ ಕರ್ಮಯೋಗಿ ಇವರು !

ಜಾತಿಭೇದವ ನಳಿದು, ನೀತಿಮಾರ್ಗದಿ ನಡೆದು,
ಭರತಮಾತೆಯ ಕೀರ್ತಿ ಲತೆಯ ಬೆಳೆದು,
ಲೋಕಪೂಜಿತರೆನಿಸಿ ಮೆರೆವ ಪೂಜ್ಯರು ಇವರು,
ವರ ಮಹಾತ್ಮರು ಗಾಂಧಿ ವೀರವರರು !
ಭರತಮಾತೆಯ ಸತ್ಯ ಪುತ್ರರಿವರು !

ಹೊನ್ನ ನೋಂಪಿಗೆ ಇಂದ್ರನಾನೆಯನು ತರುವಂದು,
ಸರಳ ಸೇತುವೆ ಬಳುಕುತಿರಲು ಕಂಡು,
ನಿಜ ಭುಜವ ನೆಡೆಗೊಟ್ಟ ಶ್ರೀಕೃಷ್ಣನಂದದಲಿ,
ಮೆರೆವರೀ ಬಾರತ ವೀರವರರು !
ಭರತಮಾತೆಯ ಕಾವ ಕುವರರಿವರು !

ರ್ಯಾನಡೆಯು, ಗೋಖಲೆಯು, ತಿಲಕ, ಲಜಪತರಾಯ,
ದಾಸ ಭಕ್ತರು ಪೊತ್ತ ಸರಳ ಸೇತು,
ಮಾಸದಂದದೊಳವರ ಬಳಿಗೊತ್ತಿ ನಿಂತವರು,
ವರ ಮಹಾತ್ಮರು ಗಾಂಧಿ ವೀರವರರು ;
ಭರತಮಾತೆಯ ನಿತ್ಯನೇಮಿ ಇವರು !

———

— ೩ —

# ಯಾದವ ಲಲಿತಾದ್ರಿ



ತಿರೆಯುವೆಳಗು ಪಡುವ ಕಡಲ ನೆರೆಯು ಸೇರಲು
ನರಣಿ ನಿಶೆಯು ಸೆರಗ ಪೊದ್ದು ಮೈಯ್ಯ ಮರೆಯಲು
ಇಂತು ಕತ್ತಲೆಸಗಿರಲ್ಕೆ—
ಸಂತಸದಲಿ ಮನವಿರಲ್ಕೆ,
ಇಂತು ನೋಡುತಿರುವೊಡಲ್ಲಿ—ಲಲಿತ ಗಿರಿಯಲಿ
ಅಂತರಂಗವಿರುವುದಮಲ ಯದುವಿಲಾಸದಿ !

ನೆರೆಯೊಳಿರ್ಪ ತರುಲತೆಗಳ ಸೊಬಗೆ ಸೂಸುತೆ
ನೆರೆದು ನೋಡುತಿರಲು ನಗೆರದಿರವ ತೋರುತೆ
ಸಾಗರದಲಿ ಮುತ್ತಿನಂತೆ—
ಆಗಸದಲಿ ತಾರೆಯಂತೆ,
ಪಸಿರ ಬನದೊಳೆಸೆವ ಮಿಂಚು ಹುಳುಗಳಂದದಿ
ಮಿಸುಪ ದೀಪ ಕಾಂತಿಯೆಸೆವುದಂದು ನಿಶೆಯಲಿ !

ಏನಿದೆಂಬಿರೇಕೆ ಕಡಲ ವಾರಿಯಲ್ಲದು
ಏನಿದೆಂಬಿರೇಕೆ ಗಗನ ಮಾರ್ಗವಲ್ಲದು
ಪಸಿರ ಬನದ ಬಿನದಮಲ್ಲ—
ಎಸೆವ ಮಿಂಚು ಹುಳುಗಳಲ್ಲ,
ನರರ ಕಲೆಯು ಕುಶಲತೆಗಳ ಮಿಗಿಲು ಹೊಳಪದು—
ಧರೆಗೆ ಸಗ್ಗವೆನಿಸಿ ತೋರ್ಪ ಪೊಳೆವ ಪುರವದು !

ಜಗದ ಜೀವರಾಶಿ ಮನೆಯ ಸಾರಿ ಬರುತಿರೆ
ತಗೆದ ಬಾಳ್ಕೆಯಲ್ಲಿ ಸೇರಿ ಭ್ರಾಂತಿಗೊಳುತಿರೆ
ಸಿಗದ ಸಿರಿಯ ಕೀರ್ತಿ ಕಾಂತೆ—
ಸೊಗದ ಕಣ್ಣ ಮಿರುಗಿದಂತೆ,
ನಿಶೆಯೊಳಂದು ನಾಟ್ಯವಾಡಿ ನಲಿಯುತಿರುವಳು—
ದೆಸೆಗೆ ದೆಸೆಗೆ ದಿವ್ಯದೀಪ್ತಿ ಯೆರಚುತಿರುವಳು !

ಲಲಿತ ಗಿರಿಯ ಸಿರಿಯ ಯಾದವೇಂದ್ರನಿರುವನು
ಕುಲಲಲಾಮ ಕೀರ್ತಿಕಾಂತೆಯೊಲಿದ ವೀರನು
ಅವನ ಕೀರ್ತಿ ನಭವನೇರಿ—
ಶಿವನ ಪಾದತಲವ ಸೇರಿ,
ಗಿರಿಜೆಯೊಲವ ಬೇಡುವಂತೆ ಅದ್ರಿಯೆಸೆವುದು—
ಪರಮ ಧರ್ಮ ಯೋಗಿಯೆನಿಸಿ ಕೀರ್ತಿ ಮೆರೆವುದು !

ಅಲ್ಲಿ ಧರೆಯ ಶಾಂತಿಯಿಹುದು ಲಲಿತ ಗಿರಿಯಲಿ—
ಚೆಲ್ವ ಕೀರ್ತಿ ಚಲಿಸುತಿಹುದು ಯದುವಿಲಾಸದಿ
ಯಾದವೇಂದ್ರ ನೊಲುಮೆಯಿಹುದು—
ಮೋದಗೊಳಿಪ ಗೀತವಿಹುದು,
ಜನನಿ ಮಹೀಶೂರ ನಾಡ ಸೊಬಗು ನಗುವುದು !
ಮನದಿ ಕೃಷ್ಣರಾಜ ಭಕ್ತಿ ಮೂಡಿ ಮಿಗುವುದು !

---

# ಟಿಪ್ಪೂ ಸುಲ್ತಾನ್



ತಾಯಿ ತಂದೆಯು ಕೆಲದಿ ಕಂಗೊಳಿಪ ಟಿಪ್ಪುವೇ,
" ಮೈಸೂರ ಹುಲಿ " ಯೆಂದು ನಿನ್ನ ಕರೆಯೆ !

ಧುರಧೀರ ನಿನಗೆ ಹೆಮ್ಮೆಗದ ಹೋಲಿಕೆ ಸರಿಯೆ--
ಧರಣಿಯುಲಿ ವೀರಾಗ್ರಗಣಿಗಳಿರಲು !

ಮುತ್ತಿ ಬಹ ಶತೃಪಡೆಗೊತ್ತಿ ಕಾಳಗವಿತ್ತೆ—
ಕತ್ತಿಯಲಿ ತತ್ತರಿದು ತನುವ ತೆತ್ತೆ !

ಕೊಳುಗುಳದಿ ಮೇಲ್ವಾಯ್ದು ವೀರಮರಣವನಾಂತೆ
ಹಿಂದಾದ ಮೈಸೂರ ಯುದ್ಧದಲ್ಲಿ!

ಗುಣಕೆ ಮತ್ಸರವಿರದು—ಯದುನೃಪರ ಸತ್ಕೀರ್ತಿ
ನಿನ್ನಧಟ ಸೋಲಿಸಿತು—ಪೇಳಲರಿದು !

ರಾಜ್ಯಲಕ್ಷ್ಮಿಯ ದಿವ್ಯ ಮೂರ್ತಿಯನು ನೀನಂದು
ಶ್ರೀರಂಗಧಾಮನಲಿ ಬಿಟ್ಟು ಪೋದೆ !

ಮಹಮದೀಯರ ಕುಲದಿ ಬೆಳೆದೆ ನೀನು
ಹಿಂದುಗಳ ಜತೆಗೂಡಿ ನಡೆದೆ ನೀನು !
ನಿನ್ನ ಸಾಹಸದೋರಿ ಮಡಿದೆ ನೀನು
ಸನ್ನುತಿಯ ಶಾಂತಿಯುಲಿ ಸುಖಿಪೆ ನೀನು !



# ಕನ್ನಂಬಾಡಿಯು ಕಾವೇರಿ

(ಕೃ ಷ್ಣ ರಾ ಜ ಸಾ ಗ ರ)

ಕನ್ನಂಬಾಡಿಯು ಕಾವೇರಿ
ಕೃಷ್ಣಮಹೀಶನ ಕಾವೇರಿ
ಸಾಗರವಾದಳು ಕಾವೇರಿ
ಟಿಪ್ಪುವು ಕೋರಿದ ಕಾವೇರಿ !

ಶಾಸನವಾಯಿತು ಟಿಪ್ಪುವಿನೆಂದು—
ಸಾಗರವಿದು ಶ್ರೀಕೃಷ್ಣನೊಳಿಂದು !
ದೇವನ ನಂಬಿದ ಶಾಸನವಂದು—
ಜೀವನ ತುಂಬಿದ ಸಾಗರವಿಂದು !

ಹೇಮಾವತಿ ತಲಕಾವೇರಿ—
ಲಕ್ಷ್ಮಣತೀರ್ಥೆಯು ರೊಡಗೊಡಿ,
ಕುಣಿಯುತೆ ಬರುತಿರೆ ಜಲನಿಧಿಯೆಡೆಗೆ
ಮಣಿದರು ಯಾದವ ರಾಯನ ಗುಡಿಗೆ !

ಯಾದವ ಭೂಪನ ಗುಡಿಯನು ಸೇರಿ
ಭುವಿಯನು ತಣಿಸ್ಸುವ ಕಳಸವ ತೋರಿ,
ಕಾವನ ಜೀವನ ಗೆರೆವಾಧಾರಿ
ಪಾವನೆಯಾದಳು ಕಾವೇರಿ !

ಹೇಮಾವತಿಯು ಸುವರ್ಣವ ತಂದು
ತಲಕಾವೇರಿಯು ಜೀವನಗೊಂಡು
ಲಕ್ಷ್ಮಣತೀರ್ಥೆಯು ಸರಿಸದಿ ನಿಂದು,
ಮೈಸೂರೊಡೆಯರ ಪಾಡಿದರಿಂದು !

ಪಾಡುವ ನೀರ್ನುಡಿ ಗುಡಿಯಲಿ ಮೊಳಗಿ
ಮೂಡುತೆ ನಡೆದಳು ಕಾವೇರಿ !
ಕೀರ್ತಿಯ ಕಾಂತೆಯ ಲತೆಯಲಿ ಬಳುಕಿ
ಬಂದಳು ದೂರದ ಜಲಧಿಗೆ ತುಳುಕಿ !

ಮೈಸೂರಿನ ನಾಲ್ವಡಿ ಶ್ರೀಕೃಷ್ಣನ
ವೈಭವವೆಲ್ಲವ ಪೇಳಿದಳು !
ಜನತೆಯು ಮೆಚ್ಚಿನ ನುಡಿಯನು ಪಡೆದು
ಪುನರಪಿ ಗುಡಿಯನೆ ಸೇರಿದಳು !

ರೈತರು ನೆಚ್ಚಿದ ಕಾವೇರಿ
ಭೂತಳಕಿಳಿದಳು ಮುದವೇರಿ !
ಮಂಗಳಮಯಳೀ ಕಾವೇರಿ
ಮಂಗಳವೀಯಲಿ ಜಸವೇರಿ !

ನಾಡಿನ ದೇವಿಯು ಕಾವೇರಿ—
ಕನ್ನಂಬಾಡಿಯ ಕಾವೇರಿ ;
ಟಪ್ಪುವು ಕೋರಿದ ಕಾವೇರಿ—
ಕೃಷ್ಣಮಹೀಶನ ಕಾವೇರಿ !

# ಹೊಯ್ಸಳ ದೇವಾಲಯ

ಗಜಗಳೇ ನಿಜವೀರ ಮಾವಟಿಗರೆಲ್ಲಿ ಸಾ
ಮಜಗಳೇ ಪಾಲಿಸುವ ಭೂನಾಥರೆಲ್ಲಿ ಮದ
ಗಜಗಳೇ ಸಗ್ಗಸುಖವೆಲ್ಲಿನಿತು ಕಾಡಿಸುವ ನರರಟ್ಟಹಾಸವೆಲ್ಲಿ ?
ನಿಜ ರಾಜ್ಯವಂ ಬಿಟ್ಟು ತಪನತಾಪದಿ ಬೆಂದು
ಭುಜಬಲವ ಕಳೆದು ದಿನರಾತ್ರಿ ಎಡಬಲಕಿಂತು
ರಜನಿಯಲ್ಲೇಕೆ ದೇಗುಲವ ಬಳಸುವಿರಿದುವೆ ಭಕ್ತಿ ವೈರಾಗ್ಯ
ಫಲವೆ !

ಆಹವಕೆ ರಾವುತರೆ ತೆರಳುತಲಿ ದೇಗುಲವ
ಬಾಹುಬಲದಿಂ ಕಾವ ಸೈನಿಕರ ವೇಗದಲಿ
ಕಾಹುರದಿ ಕರವಾಳವಂ ಝಳುಪಿಸುವಿರೇಕೆ ನಾದವಿಲ್ಲದ
ತೆರದೊಳು !
ಸಾಹಸಕೆ ಕೊನೆಯಿಲ್ಲ ಕಾಳಗಕೆ ಮಿತಿಯಿಲ್ಲ
ದಾಹವಿಲ್ಲವು ಹಯಕೆ ಶೋಕವಿಲ್ಲವು ಬಲಕೆ
ಮೋಹರವ ನಿಲ್ಲಿಸಿರಿ, ಕೊಲ್ಲದಿರಿ ರಿಪುಬಲವ, ಸಲ್ಲಿಸಿರಿ ಶಾಂತಿ
ಸುಖವ !

ಮದನಲತೆಗಳೆ ನಿಮ್ಮ ಮೃದುತರದ ಕಂಪೊಗೆದ
ಸದಮಲದ ಪುಷ್ಪಾಂಜಲಿಗಳೆಸಕವೆಲ್ಲಿ ತಳೆ
ದುದಕವಂ ಪೋಷಿಸುವ ತೋಟಗಾರನದೆಲ್ಲಿ ಕಾಮನಾ
ರಾಮವೆಲ್ಲಿ ?
ಪದುಳದಿಂ ಪುಷ್ಪವಂ ತಳೆವ ಸುದತಿಯರೆಲ್ಲಿ
ಮದಗಜದ, ಮೋಹರದ ವಾಜಿಗಳ ಪದಹತಿಗೆ
ಚೆದರದಲೆ, ಬಿರುಗಾಳಿಗೆಳುಕದಲೆ, ಬಿಸಿಲಿನಲಿ ಬಳಲದಲೆ,
ಪೊಳೆವ ಸೋಜಿಗವಿದೆಲ್ಲಿ ?

ಶರಭಗಳೆ ನೀವೇತಕಾಗಸಕೆ ತಲೆಯೆತ್ತಿ
ಪುರುಹೂತನಿಂಗುಸಿರುತಿರುವಿರಾಯುಸವ ನಿ
ಮ್ಮರಸನಿಲ್ಲದ ಬಳಿಕ ಸೆರೆಯು ತಪ್ಪಿಪರಾರು ಪೋಷಣೆಯ
ಗೈವರಾರು ?

ಹರನ ಸೇವೆಯುಲಧಿಕ ತೋಷವಂ ತಳೆದು ಸಲೆ
ಹರ ನವೋನ್ನವೊ ಯೆನುತೆ ಚೀರಿಡುವಿದೋ ನಿರುತ
ಧರೆಯ ದುಷ್ಕೃತಿಯ ಕಂಡಂಜುವಿರೊ ಸೆರೆಯಿಟ್ಟ ಶಿಲ್ಪಿ
ಯನು ದೂಷಿಸುವಿರೊ !

ಗಣನಾಥ ಕೋದಂಡಪಾಣಿ ಶಿವ ಕಮಲಭವ
ಫಣಿವೇಣಿ ಚಾಮುಂಡಿ ಲಕ್ಷ್ಮಿ ಪಾರ್ವತಿ ದಿವ್ಯ
ಗುಣಮಣಿಗಳೇ ಮರೆತಿರೇ ಜಗದ ಬಿನ್ನಪವ ನಿಮಗೇತಕೀ
ಜಡತೆಯು ?

ಗಣನೆಯಿಲ್ಲದ ಪಾಪ ಸಂಕಲೆಯ ತೊಡರಿನಲಿ
ರಣಧೀರರಂ ಜರೆದು ದಾಸ್ಯವೃತ್ತಿಯ ಬಗೆದು
ಎಣಿಕೆದಪ್ಪಿಹ ನರರ ರಕ್ಷಿಸುತಲೇಳಿಗೆಯ ಬಟ್ಟೆಯಂ ತೋರಿ
ಬನ್ನಿ ;

ಕರಿಯಕಲ್ಲಿನ ಬೀಡು ಬರಿಯ ಮೇಣದ ಗೂಡಿ
ನಿರವಾಗಿ ತೋರುತಿದೆ, ಮಕರಂದವಡಿಗಡಿಗೆ
ಸುರಿದು ಪೋಗುತ್ತಲಿದೆ, ಕಳೆಯುಳ್ಳ ದೇಗುಲವು ಬಯಲಾಗಿ
ಪೋಗುತ್ತಿದೆ ?

ಶರಣಾಗತರ ಸಂಖ್ಯೆಯುಡಗುತಿದೆ, ಎಡಬಲದ
ವರಶಿಲಾಮೂರ್ತಿಗಳ ಕಾಂತಿಯಳಿಯುತ್ತಲಿದೆ
ನರರೆ ನೀವೇಕಿಂತು ತೊರೆಯುವಿರಿ ಭಕ್ತಿಯನು ಪೂರ್ವಿಕರ
ಕುಶಲತೆಯನು ||

---

# ಹಳ್ಳಿಯ ದೇವರು

ಸುಗ್ಗಿಯ ಸಗ್ಗವ ತೋರುವನಾರು
ಮಾಗಿಯ ಹೊದಿಕೆಯ ನೀಡುವನಾರು
ಇಂದ್ರನ ಭೋಗಕೆ ನೆಲೆವನೆಯಾರು—
ದೇಶಕೆ ದೇವರ ಸಮನಾರು !

ಕಾಡನು ಕರಗಿಸಿ ನಾಡನು ಬೆಳೆಸಿ—
ರೂಢಿಯ ಜನರಿಗೆ ಸೊಂಪಿಡಿಸಿ,
ಪಾಡುತೆ ನಲಿವನು ನೇಗಿಲ ಯೋಗಿ—
ನಾಡಿನ ಕೀರ್ತಿಯು ಸಲುವಾಗಿ !

ಗುಡಿಸಿಲ ರೈತನು ಯೋಗವ ಮಾಡಿ—
ಗುಡಿಗೋಪುರಗಳಿಗಿಯ್ಯುವನು !
ಸುತ್ತಲು ಮುತ್ತುವ ಕಸದಲಿ ಬಿತ್ತಿ—
ಮುತ್ತಿನ ರಸವನು ಕೊಡುತಿಹನು !

ಬಡತನದಲಿ ಬಲು ಬಳಲುತೆ ಬರಿದೆ—
ಜಡರಿಗೆ ಭಾಗ್ಯವ ತೋರುವನು !
ಕಡು ಕಷ್ಟದಿ ತಾನಿರುತಿರಲನುದಿನ
ಪೊಡವಿಯ ಶಾಂತಿಯ ಸಲಿಸುವನು !

ರೈತನೆ ಹಳ್ಳಿಯ ದೇವರು ಮಿತ್ರಾ,
ರೈತನೆ ದೇಶಕೆ ಬೆಂಬಲನು ;
ಈತನ ಸುಖವನು ಸಾಧಿಸು ಮಿತ್ರಾ,
ಈಶನು ಎಮ್ಮನು ಮೆಚ್ಚುವನು.

---

# ಆಲದ ಕನ್ನಡ



ಬನ್ನಿರಿ ಬನ್ನಿರಿ ಕನ್ನಡ ಗೆಳೆಯರಿ ಕನ್ನಡ ಮಾತೆಯ
ಪೂಜಿಸುವಾ !
ಚೆನ್ನುಡಿಯಿಂದಲಿ ಪಾಡುತೆ ಆಲದ ನೆರಳಳಲಿ ನಿಂದು
ವಿರಾಜಿಸುವಾ !
ಆಲದ ಬೀಜವು ಮೊಳೆತಿಹುದು—
ಬಿಳಲನು ಬಿಡುತಲಿ ಬರುತಿಹುದು,
ಕಾಡನು ಕಳೆಯುತೆ, ನಾಡನು ಬಳಸುತೆ—ಬೆಳೆವುದು ಕನ್ನಡ
ವೃಕ್ಷವಿದು
—ನಿಲುವುದು ಕನ್ನಡ ವೃಕ್ಷವಿದು !

ಪಂಪನ, ರನ್ನನ, ಲಕ್ಷ್ಮೀಶನ, ಕವಿ ಮುದ್ದಣ, ಹೊನ್ನಮ
ನೊಲುಮೆಯಲಿ
ಸಂಪದದೇಳ್ಗೆಯನೆಸಗುತ್ತೆ ಆಲದ ನೆರಳಲಿ ಕುಣಿಕುಣಿ
ದಾಡುತಲಿ !
ಪೂರ್ವಿಕರಂದವ ಕಾಣುತಲಿ—
ನಮ್ಮಯ ಜಾಣ್ಮೆಯು ತೋರುತಲಿ,
ಬಸವಳಿಯದೆ ಕಬ್ಬಿಗರನು ಕೂಡಿಸಿ—ಬೆಳೆವುದು ಕನ್ನಡ
ವೃಕ್ಷವಿದು
—ನಿಲುವುದು ಕನ್ನಡ ವೃಕ್ಷವಿದು !

ಕುಲ ನಾರಿಯರನುಗಾಮಿಗಳಾಗುವ ತೆರದಲಿ ಬಾಳುತೆ
ಧಾತ್ರಿಯಲಿ
ಲಲಿತದಿ ವಿದ್ಯಾ ಬುದ್ಧಿಗಳಿಂದವರಾಶೋತ್ತರಗಳ ಸಲಿಸುತಲಿ,
ಅಸ್ಥಿರ ದೂರದ ಪರಿಯಾಗಿ—
ಮಾನ್ಯರ ತೊರೆಯದೆ ಘನವಾಗಿ,
ಸದ್ಗುಣಶೀಲವ ತೋರುತೆಸಂತತ-ಬೆಳೆವುದು ಕನ್ನಡವೃಕ್ಷವಿದು
—ನಿಲುವುದು ಕನ್ನಡ ವೃಕ್ಷವಿದು !

ಕವಿಗಳು, ಚಿತ್ರಿಕ, ಶಿಲ್ಪಿಗಳೆಲ್ಲರು, ಬಲ್ಲಿದ ಬಡವರು ಸಹಿತಾಗಿ
ಜವದೊಳು ಕನ್ನಡನುಡಿತಿಲಕವ ನಿಜಫಣೆಯಲಿ ಧರಿಸುತೆ
ಗೆಲುವಾಗಿ,
ಬಡವರಿಗೆನ್ನವ ನೀಡುತಲಿ—
ವಿದ್ಯಾದಾನವ ಮಾಡುತಲಿ,
ಜಡತೆಯ ಬಿಡುತಲಿ ಸ್ವಾರ್ಥವ ನೀಗುತೆ—ಬೆಳೆವುದು ಕನ್ನಡ
ವೃಕ್ಷವಿದು
—ನಿಲುವುದು ಕನ್ನಡ ವೃಕ್ಷವಿದು !

ಧಾರುಣವಾಗಿಹ ದೇಶದ ಶಾಂತಿಯನೆಲ್ಲರು ರಕ್ಷಿಸುತಾದರದಿ
'ಧೀರರು ನಾವು'—ಎಂಬುವ ಚೇತನ ಮಂತ್ರವ ಜಪಿಸುತೆ
ಸಂತಸದಿ,
ಐಕಮತ್ಯದಲಿ ಕೂಡುತಲಿ—
ಏಕ ಧರ್ಮದಲಿ ಬಾಳುತಲಿ,
ಶ್ರೀಕರದೇವನ ಕೃಪೆಯಿಂ ಬೆಳಗುತೆ—ನಿಲುವುದು ಕನ್ನಡ
ವೃಕ್ಷವಿದು
—ಅಲದ ಕನ್ನಡ ವೃಕ್ಷವಿದು !

---

# ಕ ವಿ ತೆ

ಸರಿಸಕೆ ಸಾರುವೆ ಕನ್ನಡ ಕವಿತೇ,
ಸರಸವ ಸೂಸುತೆ ಎನ್ನೆದೆಗೆ!
ಹರುಷದಿ ತೆರಳುವೆ ಎಲ್ಲಿಗೆ ವಿನುತೇ,
ಕರುಣಿಸು ನೀನಾರೆಂದೆನಗೆ!

—ಹಸಿವನು ಮರೆತೆನು ನಿದ್ರೆಯನಳಿದೆನು
ಬೆಸನವ ಬಿಟ್ಟೆನು ನಿನಗಾಗಿ;
ಕುಸುಮವನಿರಿಸುತೆ ಪೂಜಿಪೆನೆಂದೊಡೆ
ನುಸುಳುವೆ ಮಾಯದ ಬೆಳಕಾಗಿ!—

ನೀನೆನ್ನೆದೆಯಲಿ ಬೆಳಗುವ ದೀಪವೆ,
ನೀನೀ ಬರೆಯುವ ಲೇಖನಿಯೆ?
ನೀನೀ ಶಿರದಲ್ಲರಳಿದ ಹೂವೇ,
ನೀನಾರೆಂಬುದ ಪೇಳುವೆಯಾ?

ಕಲ್ಲಿನ ದೇವರು ಮಣ್ಣಿನ ದೇವರು
ಬಣ್ಣದ ದೇವರು ನೀನಲ್ಲ!
ಎಲ್ಲಾ ದೇವರೊಳಡಗಿಹ ದೇವನು
ಬಲ್ಲನೆ ಪೇಳಲೆ ನಿನ್ನಿರವ?

ವಾಣಿಯು ವೀಣೆಯ ನಾದವೆ ನೀನು,
ಮಾಣಿಕದೊಡವೆಯ ನವರುಚಿಯೆ!
ವಾಣಿಯು ಕರುಣ ಕಟಾಕ್ಷವೆ ನೀನು?
ಕಾಣೆನು ನಿನ್ನಯ ರೂಪೇನು!

ಈ ನರಜೀವಿಯ ಮೋಹಿಸಿ ನೀನು
ದೀನನ ವರಿಸಲು ಬರುತಿರುವೆ—
ನಾನಿದನರಿತೆನು ನಿನ್ನಯ ಪ್ರೇಮಕೆ
ನಾನೇನೀಯಲಿ ಸುಪ್ರಭೆಯೆ !

—ಎನ್ನಯ ಜನುಮದ ಧಾರೆಯನೀವೆನು
ಬಿನ್ನಹವೊಂದಿದೆ ನಿನಗಾಗಿ—
ಎನ್ನರಮನೆಯಲಿ ಪಾಪಿಗಳಿರುವರು
ನಿನ್ನಯ ಬೇಟಕೆ ಮಿತವಿರಲಿ !

ಬೇಸರವಾಗಲು ಕರೆವೆನು ಬಾರೌ,
ಆಸೆಯ ಸಲಿಸಲು ನೀ ಬಾರೌ !
ಮೀಸಲ ಕಾಲದಿ ಕರೆವೆನು ಬಾರೌ,
ಭಾಸುರ ಭಾವವ ನೀ ತೋರೌ !

—ಕರೆದೊಡೆ ಬರುವೆಯ ಲೋಕದ ಜನನೀ,
ಅರಿಯೆನು ನಿನ್ನಯ ಮಾಯೆಯನು !
ಧರೆಯೊಳು ನಿನ್ನಯ ಸೇವೆಯ ಬಯಸುತೆ
ನರರೆಲ್ಲೆಲ್ಲಿಯು ಕಾದಿಹರು !

ಮಕ್ಕಳ ತೊಟ್ಟಿಲೊಳಿಡುವೆನು ನಾನು !
ಮಿಕ್ಕುದನೆಲ್ಲವ ನೀ ಬಂದು,
ಅಕ್ಕರೆಯಿಂದಲಿ ಹಾಸುತೆ ತೂಗು—
ಸಕ್ಕರೆಯಂತಹ ಜೋಗುಳದಿ !

---

# ತಬ್ಬಲಿಯ ಸೊಬಗು



ಎಳೆಯನಾಗಿ ತಾಯ ನೀಗಿ
ಬಳೆಯುವಂದು ತಂದೆ ನೊಂದು
ಇಳೆಯ ಸಿರಿಯು ಕಳೆಯಿತಕಟ ಪಾಪಿ ಕಂದನೆ,
ಒಲವಿನಿಂದೆ ಬಾಳುವಂದು ಮೋಸವಾದುದೆ !—

—ಎನುತೆ ಬಂಧು ವರ್ಗದವರು
ನೆನೆದು ತಬ್ಬಲಿಯನು ಕಂಡು
ಕನಿಕರದಲಿ ನಟಿಸಿ ಬರಿದೆ— ಅಂತರಂಗದಿ
ಜನಿಸಿದತುಳಸಂತಸದಲಿ ದೂರ ಸಾರ್ದರು !

ಗೆಳೆಯನೊರ್ವನೈದಿ ಮಿತ್ರ
ನಳಲ ಕಂಡು ಧೈರ್ಯಗೆಡದೆ
ಬೆಳೆವ ಮಾರ್ಗವರುಹಿ—ಕೀರ್ತಿವಂತ ನೀನಿರೆ
ಕಳೆಯಲೇನು ತಾಯಿ ತಂದೆ—ಎನುತೆ ನುಡಿದನು ;

ಮತ್ತೆ ಕುಲ ಮುಖಂಡರೆಲ್ಲ
ಸುತ್ತುಗಟ್ಟಿ ನುಡಿದರಾಗ—
ಸತ್ತ ಜನರ ಚಿಂತೆಯೇಕೆ ನಿನ್ನ ಸಾವಿನ
ಚಿತ್ತನರಿತು ಮುಂದುಗಂಡು—ಬಾಳು ಎಂದರು;

—ಇಂತು ಫಲವು ನುಡಿಯ ಕೇಳಿ
ಕಂತುಪಿತನ ನೆನೆದು ಮನದಿ

ಚಿಂತಿಸಿದನು ತಬ್ಬಲಿಗನು—ಜಗದ ಮಾಯೆಯು
ಎಂತು ತಿಳಿವೆನಾರು ಹಿತರು ಯಾರು ಪಗೆವರು !

—ದೇವ ಸುಖಕೆ ನೆಲೆಯು ನೀನು
ಯಾವುದಿತ್ತರದುವೆ ಸಾಧು !
ಕಾವಕರ್ತನೆನುಗೆ ವಿಷವ ಕೊಡಲು ಬಲ್ಲನೆ !
ನಾವು ಮರ್ತ್ಯರದನು ಮೆಚ್ಚಿ ನಡೆವೆವಲ್ಲವೆ !

ನಿನ್ನ ನಂಬಿ ಕಾರ್ಯವೆಸಗಿ
ನಿನ್ನ ಕೋರಿ ಸುಖದಿ ಬೆಳಗಿ
ನಿನ್ನ ವಿಶ್ವದಾಟಗಳನು ನೋಡಿ ನಲಿವೆವು—
ನಿನ್ನ ಪಾದದಮಿತಶಾಂತಿಯಲ್ಲಿ ಸುಖಿಪೆವು !

ಜಗದ ಜೀವ ಯಾತ್ರೆಯಲ್ಲಿ
ನುಗಿದು ಬರುತಲಿಡರದಂತೆ
ಮೊಗವ ತೋರಿ ರಕ್ಷಿಸಯ್ಯ ಜಡರು ನಾಂಗಳು—
ಹಗರಣವನು ಬಿಡಿಸು ದೇವ ಮರಳಿ ಜನಿಸೆವು !

———

# ಅಂಜಬೇಡೆಲೆ ಹೂವೆ ನೀನರಳುವಂದು

ಅಂಜಬೇಡೆಲೆ ಹೂವೆ ನೀನರಳುವಂದು—
ತಂಗದಿರ ತಂಬೆಲರ ನೆರೆಯಿಲ್ಲವೆಂದು !
ಮುನ್ನ ಮಾಡಿದ ಪುಣ್ಯಫಲವಿರಲು ನೀನಿಂತು
ಬನ್ನಗೊಳ್ಳುತೆ ಬೆದರಿ ನಿಲ್ಲಲೇಕೆ ?—

—ಕೆಲಬಲದ ಬಿರುಮುಗುಳ ಕಿತ್ತು ಯುಮುನಾಳು
ಒಲಿದು ನಿನ್ನನು ಬಿಡಲು ಕಾರಣವದೇನು ?
ಬಲು ಚೆಲುವಿನಿಂದೆ ನಿನ್ನಯಕುಲಕೆ ನೀನೊಂದೆ
ಉಳಿದೆಯೇತಕೆ ಬರಿದೆ ನಿಂದುದೇಕೆ ?—

ದೇಗುಲದಿ ಶಿಲೆಯಾಗಿ ನಿಂತ ದೇವನ ಬಳಿಗೆ
ಸಾಗಿ ಸದ್ಗತಿ ಪಡೆಯಲೆಂದು ಕಾದಿಹೆಯ ?—
—ದೇಗುಲದ ಪೂಜಾರಿ ನಿನ್ನ ಬಯಸುವನೇನು,
ರಾಗದಿಂ ಕೊಂಡೊಯ್ದು ಪೂಜಿಸುವನೆ ?

ರಾಜಮುಕುಟದಿ ಮೆರೆವೆನೆಂಬಾಸೆಯಿಹುದೇನು
ಪೂಜ್ಯತೆಯ ಗಳಿಸಿದಪೆನೆಂಬ ಮನವಿಹುದೆ ?—
—ರಾಜ್ಯದಲಿ ನಿನ್ನಿರವ ತಿಳಿಯದವರೆನಿತಿಹರು,
ಸೋಜಿಗವು ನಿನ್ನನಿವರಾರೈವರೆ !

ನಾರಿಯರ ಚೂಡದಲಿ ನಿಲ್ಲಲೆಂದಿಹೆಯೇನು
ನೀರೆಯರ ತನುವೆಳಗನುಕ್ಕಿಸುವೆನೆನಲು ?—
—ಸಾರುವರೆ ಕಾನನದಿ ದೂರುವಿಹ ನಿನ್ನೆಡೆಗೆ
ನಾರಿಯರು ಕೈತೋಟದೊಲವನುಳಿದು !

ದಾರಿಗರ ಮೆಚ್ಚಿಸುವ ಬಯಕೆ ನಿನಗಿಹುದೇನು
ದೂರದೇಶದ ಜನರ ನೆರವಿಯೊಳು ಸಾರಿ ?
ಮಿಾರಿ ಜಲಧಿಯ ಬಿಟ್ಟು ಬಾಡಿದನಿಮಿಷದಂತೆ
ಕಾರಿರುಳ ಪೊಕ್ಕವೊಲು ಮುಂಗಾಣದಿರುವೆ !—

—ಎಲೆ ನಿಪುಣ, ಪೂಜಾರಿ ದೊರೆ ನಾರಿ ದಾರಿಗರ
ನೊಲಿದು ಮಾಯೆಗೆ ಸಿಲುಕಿ ಮಿಾರಿ ಪೋದಪನೆ !
ಉಲಿವೆ ಕೇಳೀಜನರು ಕೊರಳನರಿಯದೆ ಬಿಡರು
ಒಲವಿನಲಿ ಮೃತ್ಯುವನು ತರುವರೆನಗೆ !

ಅದರಿಂದೆ ನಾನಿಂತು ದೂರಕಾನನದಲ್ಲಿ
ಸದಮಲಾತ್ಮನ ದಯದಿ ಮುದವನಾಂತಿಹೆನು ;
ಹೃದಯೇಶನಿರುವನಕ ನೆರೆಮನೆಯ ಸಿರಿಯೊಲ್ಲೆ
ಅದು ಕಾಡ ಮುಳ್ಳಮೊನೆಯೆಂದು ಬಲ್ಲೆ !

ಇರುವೆಡೆಯೆ ಬೆಳೆದು ನಾನಿರುವೆಡೆಯೆ ಮಡಿದು
ವರದೇಶ ಬಾಂಧವರನಾದರಿಸಿ ನಲಿದು,
ಧರೆಯ ಸಿರಿಗಾಸಿಸದೆ ದುರುಳರೊಡನಾಡದಲೆ
ಮೆರೆಯುವೀ ಭಾಗ್ಯವಿರಲೆಂಬುದೆನ್ನಾಶೆ!

ಜಗದ ತಿಮಿರವು ಜಾರಿ ಅರುಣನುರೆಮೂಡಿ
ಮುಗಿಲ ಕಾಂತಿಗೆ ಮರುತನಾಡುತಿರುವಾಗ—
ಮಿಗಿಲೆನ್ನ ಬನ್ನವನು ಚೆನ್ನುಡಿಯ ಕಬ್ಬಿಗರು
ಪೊಗಳಲೆಂಬುವುದೊಂದು ನನ್ನ ಪಿರಿಯಾಸೆ !



# ಕಲ್ಲು



ಕಲ್ಲೇ ಕಲ್ಲೇ ನಿನ್ನನ್ನೇತಕೆ
ಕಲ್ಲೆಂದೊರೆವರು ಜನರಲ್ಲಿ ?
ಕಲ್ಲಿಲ್ಲದ ಕಲ್ಲಾವುದು ಎನ್ನಲು
ಕಲ್ಲದೆಯೆಂಬರು ಭುವಿಯಲ್ಲಿ !

ಮೋಸದ ಗಾದೆಗೆ—'ಕಲ್ಲು ಬಿತ್ತೆಂಬರು'
ಸೂಸುತೆ ಶಾಪವ ಕಲ್ಲಿಂದೆ !
ಘಾಸಿಯ ಪಡಿಸಿತೆ ಇಪರನು ಕಲ್ಲು—
ಬೀಸುವ ಕತ್ತಿಯು ತೇದಿಂದೆ !

ಕಲ್ಲಿಂದಲೆ ಮನೆ, ಕಲ್ಲಿಂ ದಾರಿಯು
ಕಲ್ಲಿಂ ಬೆಟ್ಟವು—ಕಲ್ಲರಳೆ
ಎಲ್ಲೆಲ್ಲಿಯು ಹೂವಾಗಿರಲೇತಕೆ
ಪೊಲ್ಲಂ ನುಡಿವರು ನಿನ್ನಳಿದು !

ಪೂಜೆಯ ದೇವರು ರಾಜರ ಪ್ರತಿಮೆಯು
ಸಾಜದಿ ಮೆರೆವುವು ಕಲ್ಲಿಂದೆ ;
ರಾಜಿಪ ಶಿಲ್ಪವ ರಾಜ್ಯದಿ ಮೆರೆಸುವ
ಮಾಜದ ಕಲ್ಲನು ದೂರುವರೆ !

ಕಲ್ಲಿಂ ಕಬ್ಬಿಣದಣುಗಳು ಕಠಿಣವು
ಕಲ್ಲಿಂ ಚಿನ್ನಕೆ ಬೆಲೆ ಬಹಳ !

ಕಲ್ಲಿದೆಯೆಂಬರೆ ಕಬ್ಬಿಣವಿರುತಿರೆ,
ಉಲ್ಲಸವಲ್ಲವೆ ಚಿನ್ನವೆನೆ !—

—ಮಾಸಿದ ಸೀರೆಯ ನಾರಿಯ ಜರೆಯಲು
ಮಾಸಲು ಬಣ್ಣವೆ ಗುಣದಲ್ಲಿ ?
ಕಾಸಿನ ಕಲ್ಲಿಂದೆಲ್ಲರು ಜರೆಯಲು
ಕಾಸೇ ಮೂಲವು ಸಿರಿಯಲ್ಲಿ !

ಹುಟ್ಟುತೆ ಬಂದಿತು ಈ ಕಲ್ಲಿಳೆಯೊಳು
ಮೊಟ್ಟಮೊದಲಿಗೆನ ಸ್ನೇಹಿತನು !
ಕಟ್ಟಿದರೀತನ ಹೆಸರಲಿ ಗಾದೆಯ
ನಿಟ್ಟರು ಸಲಿಗೆಯನಾತನಲಿ !—

—ದೂಷಣೆ ಭೂಷಣೆಗೆಂದಿಗು ಕಲ್ಲೇ
ಆಸೆಯ ನೀನಿಟ್ಟಿರಬೇಡ—
ದೂಷಣೆ ಭೂಷಣೆಯೆಲ್ಲವು ಮರೆಯುವ
ಭಾಷಣವಲ್ಲದೆ ಪೆರತುಂಟೆ !

ಇತರರು ನಿನ್ನನು ಏನೇ ಕರೆಯಲಿ
ಸತತವು ನಿನ್ನನು ನಾ ಮರೆಯೆ !
ಹಿತದಿಂ ವಿಶ್ವಸಮಾಧಿಯ ಕಾಯುತೆ
ಸತತವು ಧರಣಿಯ ನೀ ತೊರೆಯೆ !

———

# ದುಂಬಿಯ ಲೋಕ

(ಐಕಮತ್ಯ—ಏಕಧರ್ಮ)

ಬಿರು ಬಿಸಿಲಿನಲಿ ಬಳಲಿ ವಾಸವನ ಜತೆಗೂಡಿ
ಬರುತಿರಲು ಪೊಸ ಪೂತ ಮಾವಿನೆಡೆಗೆ—
ಸರಿಸದಲಿ ಕಿವಿಗೆಡೆದ ' ಜಾ ' ನಾದವೇನಿಂತು
ಗರಿಗೆದರಿ ಪಾಡುತಿಹ ಭಾವವೇನು !

ನಾರಿಯೋ ನನ್ನಂತೆ ಬಳಲಿರುವ ಪ್ರಾಣಿಯೊ,
ಮಾರಿಯೋ ಮಲೆಯುತಿರುವ ಮದ್ದಾನೆಯೊ !
ಆರೆಂದು ಗದರಿದೆನು—' ಛೀ ' ಎಂದು ಪಾರಿತದು
ಸೇರಿತಾ ಮಾಮರನ ಕುಸುಮದಲ್ಲಿ !

ಎದ್ದು ಮರೆಯಲಿ ನಿಂತೆ ನಂತೆ ನೋಡಿದೆ ಮರಳಿ
ಮುದ್ದು ಜೇನಿನ ಗೂಡ ಸಿರಿಯ ಬಯಸಿ !
ಗದ್ದಲವ ಮಾಡದಲೆ ಕಾರ್ಯಕುಶಲತೆಯಲ್ಲಿ
ಇದ್ದುವಾ ದುಂಬಿಗಳು ಸೊದೆಯ ಗಳಿಸಿ—

—ದುಂಬಿಗಳೆ ಕರಿಮೈಯ ಮುತ್ತುಗಳೆ ಮಾಮರದಿ
ತುಂಬಿ ಚಿತ್ರಿಸುತಿರುವ ಚಂದವೇನು ?
ಹಂಬಲಿಸಿ ಮನ್ಮಥನಿಗರ್ಪಿಸಲು ಪರಿಮಳದ
ತಂಬುಲವ ಪಿಡಿದಿಂತು ಮೆರೆವಿರೇನು ?

ಲೋಕದಲಿ ಸಕಲವನು ತಿಳಿದೆನೆನ್ನುವ ನರನು
ಬೇಕೆನುವ ಮಕರಂದವಿಲ್ಲದಿರಲು,

ನೀ ಕುಸುಮಮಧ್ಯದೊಳಸಾರಿ ಬಂಡನು ಮೆದ್ದು,
ಪಾಕವನು ತರಬಲ್ಲೆ ನರರ ಮಿೀರಿ !

ಎಂಜಲೆಂಜಲು—ಎನುವ ಮಾನವನು ನೀನುಂಡ
ಎಂಜಲನು ತಾನುಂಡು ಜೀವಿಸುವನು !
ಅಂಜಬೇಡೆಲೆ ದುಂಬಿ ನಿನ್ನ ಗೂಡಿನ ತೆರದಿ
ರಂಜಿಸುವ ಬೀಡುಂಟೆ ಲೋಕದಲ್ಲಿ !

ಉಪಕಾರಿ ನೀನು, ಪ್ರತ್ಯುಪಕಾರಕಾಶಿಸದೆ
ವಿಪಿನಕ್ಕೈದಿದೆ ನರರ ಪಾಪಕಂಜಿ !
ಅಪರೂಪವೆನಿಪ ವನಸುಂದರಿಯ ಮೋಳದಲಿ
ತಪವನಾಚರಿಸುತಿಹೆ ಸೊಗವ ಬಯುಸಿ !

ಐಕಮತ್ಯದಿ ನಡೆದು ಏಕಧರ್ಮದಿ ಬೆಳೆದು
ಸಾಕಾರವಡೆದಿರುವ ಮೂರ್ತಿ ನೀನು !
ಕಾಕುಮತಿಗಳು ನಿನ್ನನೋಡಿ ಬುದ್ಧಿಯ ಗಳಿಸಿ
ಲೋಕಪೂಜಿತರೆನಿಪ ಗುರುವು ನೀನು !

ಎಲ್ಲರಿಂ ಮಿಗಿಲಾದ ಶಿಲ್ಪಿ ಚತುರನು ನೀನು !
ಎಲ್ಲರಿಂ ಪಿರಿದಾದ ದಾನಿ ನೀನು !
ಬಲ್ಲವರ ತಲೆದೂಗಿಸಲರಿತ ಗಾಯಕ ನೀನು !
ಉಲ್ಲಸದಿ ಜೀವಿಸುವ ನಿಪುಣ ನೀನು !

ವಿಷವುಳ್ಳ ಪ್ರಾಣಿ ನೀನೆಂದು ಮೂದಲಿಸುವರೆ,
ವಿಷವಿಲ್ಲದವರಾರು ಲೋಕದಲ್ಲಿ ?
'ವಿಷಕೆ ವಿಷ, ಸವಿಗೆ ಸವಿ 'ಇದುವೆ ನಿನ್ನಯ ನಿಯಮ-
ವಿಷದೊಳಮೃತದ ಸವಿಯ ತೋರ್ಪೆ ನೀನು !—

—ಇಂತಿರಲು ಮಾಮರಕೆ ಕಲ್ಲ ಬೀಸುತಲಲ್ಲಿ
ನಿಂತಿರಲು ಬಾಲಕರು ಕಾಯ ಬಯಸಿ ;
ಅಂತರಿಸಿತಳಿವಿಂಡು ಹಾರಿದುದು ನಭದಲ್ಲಿ
ಚಿಂತಿಸುತೆ ಗದರಿದೆನು ಬಾಲರನ್ನು !

ಹಿಂದಟ್ಟಿ ಬರುವ ದುಂಬಿಯ ಬಳಗವನು ನೋಡಿ
ಮುಂದುಗಾಣದೆ ಬಾಲರೋಡುತಿರಲು—
ಅಂದು ತಿಳಿಯಿತು ಜನರ ಚೆಂದದಾಟದ ಬೆಡಗು !
ಬಂಧುರದ ವಿಧಿ ವಿಶ್ವಪ್ರಕೃತಿಯಿಹ ಸೊಬಗು !—

—ಪ್ರಕೃತಿ ನಿಯಮವ ನಳಿದು ವಿಕೃತಿರೂಪನು ತಳೆದು,
ವಿಕೃತಾತ್ಮದಲಿ ಪಾಪಕೂಪಕಿಳಿದು,
ಸುಕೃತವನು ಬಯಸುವೊಡೆ ವಿಕೃತಿಯೇ ಫಲವಹುದು-
ಪ್ರಕೃತಿ ನಿಯಮವ ವಿಶ್ವವೇ ಮಾರಲರಿದು !

ಎಲ್ಲಿ ಆಸೆಯ ಪಾಶವಳಿಯದಿಹ ನರಲೋಕ !
ಎಲ್ಲಿ ತನಿರಸಗರೆವ ಪುಣ್ಯಲೋಕ !
ಎಲ್ಲಿ ಮಾಯೆಗೆ ಸಿಲುಕಿ ದೆಸೆಗಾಣದಿಹಲೋಕ !
ಎಲ್ಲಿ ಕವಿಗಳು ಕರೆವ ಸತ್ಯಲೋಕ !

---

# ಚಿಗುರಿದ ಹುಣಿಸೆ



ಮಾಡಲು ಕೆಲಸವು ಕಾಣದೆ ಏನೂ
ನೋಡುತೆ ಕುಳಿತಿರೆ ಗಗನವನು,
ಸುರ ನರ ಕಿನ್ನರರೆಲ್ಲರ ಯೋಚನೆ
ಹರಿಯಿತು ಕಂಡಳು ಚಿಗುರಿದ ಹುಣಿಸೆ !—
—ಸರಿದಳು ಮನದಲಿ ಬೇಸರವಡಗಿತು
ನಚ್ಚಿನ ನೋಟದಲಿ !
ಚೆಲುವನು ಚೆಲ್ಲುವ ಚೆಂದದ ಚೆನ್ನಿಯು
ಸೊಂಪಿನ ಸೊಬಗಿನಲಿ !

ನೋಡಿದೆನೀಪರಿ ತಳಿತಿಹ ತರುವನು
ಮೂಡುತೆ ಮನದಲಿ ನೆನಪುಗಳು !
ಹಿಂದಿನ ದಿನಗಳ ಬಾಳದು ಬೆಳಗಿತು,
ಸಂದಿತು ಪರಮೋತ್ಸಾಹವು ಮನದಲಿ !—
—ಅಂದದಿ ಮರದೆಡೆ ಚಿಗುರನು ಬಾಲ್ಯದಿ
ಮೆದ್ದಾಹ್ಲಾದದಲಿ,
ಚೆಂದದೊಳಾಟವನಾಡುತಲಿದ್ದಾ
ನಂದದ ಬಯಕೆಯಲಿ !

ಮರವೆಂದೊಡೆ ಮೂರಾಳಿನ ತಬ್ಬಿನ
ಮರವದು ಬಲು ಮುದಿ ಮುದಿಯಾಗಿ !
ನನ್ನಯ ತಂದೆಯು ತಾತನ ಹಿಂದಕೆ
ಮಾನಿತರಾರಿದ ನೆಟ್ಟರೊ ಹರಸುತೆ !—

—ಏನಿದರೂಟವನೆನಿತೋ ತಲೆಗಳು
ಮೆದ್ದಿವೆ ಕಾಲದಲಿ!
ಏನಿದು ಮುದಿಯಾದೊಡೆ ಸವಿಯೂಟವ
ತಿದ್ದುವ ಶೀಲದಲಿ!

ಹುಣಿಸೆಯ ಮರವನು ಬಣ್ಣಿಸರಾರೂ
ಹಣ್ಣನು ಮೆಲುವರು ಸವಿಯಾಗಿ!
ಮರವದು ಭೂತದ ನೆರೆಯೆನ್ನುವರು,
ತಾರರು ಮನೆಮಠಕೀಮರಮುಟ್ಟನು!—
—ಹರುಷದಿ ಬಯಸುತೆ ಹುಣಿಸೆಯ ಹಣ್ಣನು
ಬಿಡರೀ ಮಾನವರು!
ತಿನ್ನಲು ತೇಗಲು ಬಯಸುವರೀತಕೆ
ಭೂತದ ಮರವಿದನು!

ಚಿಗುರಿದ ಚೆಲುವೆಯೆ ನಿನ್ನನು ನೋಡಲು
ಹಗೆರಣವೆಲ್ಲವು ತೊಲಗುವುದು!
ಕಾಮನ ಕಣೆಯನು ಮೀರಿದ ಚೆಲುವನು,
ಸೋಮನ ಜರೆಯುವ ಸೊಂಪಿನ ಸೊಗಸನು,
ನೇಮದಿ ಧರಿಸಿಹೆ—ಚೈತ್ರದಿ ಮೆಚ್ಚುವ
ಸುಗ್ಗಿಯ ವಾಸಂತ!
ನಿನ್ನಯ ಹಣ್ಣನು ಕಾಣುತೆ ನಲಿವನು
ಮೆಚ್ಚುತೆ ಹೇಮಂತ!

---

# ನಿದ್ರಾದೇವಿ



ಸುಧೆಯು ಸಾರವ ಸವಿದ ಸುಖವ ಮೀರಿದ ನಿದ್ರೆ !
ಅಸನವಸನದ ಬೆಡಗೆನತಿಕರಿಪ ಸವಿನಿದ್ರೆ !
ಪಂಚಭೂತದ ಸಿರಿಯುನಣಕಿಸುವ ವರನಿದ್ರೆ !
ಮಂಚ ಮೇಲ್ಹಾಸುಗೆಳ ಬಯುಸದಿಹ ನಿದ್ರೆ !—

—ನೀನಿರುವ ನೆಲೆಯೆಲ್ಲಿ ನೀಬರುವ ಗುರಿಯೆಲ್ಲಿ ?
ನಿನಗೆ ಬೆಲೆಯನು ಕಟ್ಟಿ ಕೊಳುವ ಮಾನವರೆಲ್ಲಿ ?-

—ದಿವಿಜರಲಿ ನೀನಿಹೆಯೊ ದಾನವರ ಸೇರಿಹೆಯೊ,
ಭುವಿಯ ನರರನು ಮೆಚ್ಚಿ ಮಿಗಿಲು ಚರಿಸುವೆಯೊ,
ಅವನಿಯಲಿ ನಿನ್ನೊಲುಮೆಗಾಸೆಪಡದವರಾರು !
ಸುಮನೋನುರಾಗದಿಂ ಪೊಗಳದವರಾರು !

ವ್ಯಾಯಾಮವಿರಲೇಕೆ ವ್ಯಾಸಂಗವಿರಲೇಕೆ ?
ಮಾಯೆ ನೀನೊಲಿಯದಿಹ ದೇಹಸುಖವೇಕೆ ?
ಕಾಯಪುಷ್ಟಿ ಸದಾತ್ಮಸಿದ್ಧಿ ಬುದ್ಧಿಗಳನಿತು
ಪಾಯವಿಲ್ಲದೆ ಕೆಡೆವ ನಿನ್ನ ಸೇವಕರು !

ಸೃಷ್ಟಿಕರ್ತನ ದಿವ್ಯಪ್ರೇಮಸಿರಿಯೆನಲೇನು ?
ಜೀವಿಗಳ ಸಾರೋಗ್ಯ ಸಿಂಧೂರವೆ !
ಸಾವನರಿಯದ ಪರಮದೇವಿ ನೀನೆನಲೇನು ?
ಕಾವದೇವನ ಕೃಪಾವಾರಿಧಿಯ ಹೊನಲೆ !



# ಬಡತನ

(೧)

ಒಂದು ದಿನ ಕಲ್ಯಾಣಪುರದ ಬೀದಿಗೆ ಬರಲು,
ಅಂದವನು ನೋಡುತಲಿ ಜನರ ಸಿರಿಯು !
ಅಂದು ಕಂಡೆನು ಒರ್ವ ತರಳನಾತನು ಭರದಿ
ಬಂದನಾ ಮಿಠಾಯಿ ಅಂಗಡಿಯೆಡೆ !

ನೋಡಿದನು ಪಾಕವನು ಹಿಡಿದನು ಸುವಾಸನೆಯು
ಲಾಡು ಬೂಂದಿ ಜಿಲೇಬಿ ಕಾರದವಲಕ್ಕಿ !
ನೋಡಿದನು ತಿಂಡಿಯುನು ಮರಳಿ ಆಘ್ರಾಣಿಸುತೆ
ಕೂಡಿದುದು ಬಾಯಲ್ಲಿ ಜೊಲ್ಲನೀರು !

ಹುಡುಕಿದನು ಆತುರದಿ ಜೇಬುಗೀಬುಗಳೆಲ್ಲ
ಸಡಗರದಿ ಚಂದಿಗಿಂದಿಯು ಬಟ್ಟೆಗಳನು ;
ಬಡಹುಡುಗನೆಲ್ಲಿ ಕೈಯಿಟ್ಟರೂ ಬರಿದಾಯ್ತು,
ಉಡುಗೆ ತೊಡುಗೆಯೊಳಿಲ್ಲ ಒಂದು ಕಾಸೂ !

ಅಂಗಡಿಯು ಕೆಳಗಡೆಯು ಬಚ್ಚಲಲಿ ಹೊಕ್ಕವನು
ತಂಗಿ ಮೆಲ್ಲನೆ ಸಂದಿಯುಲಿ ಕೈಯ್ಯ ಸರಿದು,
ಅಂಗಡಿಯು ಭಕ್ಷ್ಯಗಳ ಕದಿಯಲೆತ್ನಿಸುತಿರಲು
ಇಂಗಿತವ ತಿಳಿದನಾ ವ್ಯಾಪಾರಿಯು !

ಕೆಳಗಿಳಿದು ತರಳನನು ತೀಡಿದನು ಬೆತ್ತದಲಿ !
ಬಲುಚೀರಿ ನರಳುತಲಿ ಓಡುತಿರಲು,
ಕನಿಕರದಿ ಕರಗಿತೆನ್ನಯ ಹೃದಯ ಬಾಲಕನ
ಬಳಿಗೈದಿ ಕೇಳಿದೆನು ಬೇಕಾದುದ !

ತಿಂಡಿಯನು ಕೊಡಿಸುವೆನು ಬೇಕಾದುದನು ಕೇಳು,
ಖಂಡಿತವ ಪೇಳೆನಲು ನುಡಿದನವನು,
ಅಂಡಲೆದು ರೋಧನೆಯು ನಿಲಿಸಿ ಬಿಕ್ಕಳಿಸುತ್ತೆ
ಮಂಡೆಯಲಿ ಕೈಯಿಟ್ಟು ಮೆಲ್ಲನಿಂತು !—

—ನಾನು ಕದಿಯುವನಲ್ಲ ಹೊಟ್ಟೆ ಕದಿಯಿಸಿತಯ್ಯ !
ಏನುಮಿಲ್ಲದೆ ಹಸಿವ ತಡೆಯದಿರಲು,
ನಾನಿಂತು ಗೈದೆನ್ನೆ ನಿನ್ನಾಣೆಯೆಂದೆನುತೆ
ದೀನನಂದದಿ ಪೇಳಿ ಪೋದನವನು !—

(೨)

—ಬಳಿಕ ಮತ್ತೊರ್ವ ಬಾಲನು ಕನಲಿ ದೂರದಲಿ
ಗೆಳೆಯರೊಳು ಕಾದುವುದ ನೋಡಿ ನಿಲಲು,
ಗೆಳೆಯರ್ಗೈದಿದರೆನ್ನಬಳಿಗೆ ದೂರನು ತಂದು
ಮಲೆತಿಹನು ಈ ಬಾಲನೆಂದು ನುಡಿದು ;

ಹಣಗಾರನೀತಲದರಿಂದೆ ಎನ್ನನು ಕುಟ್ಟಿ
ಹೆಣವ ಮಾಡುವೆನೆಂದು ಬೆದರಿಸುವನು !
ಗುಣವಿಲ್ಲದೀತನಾ ಹಣವೇತಕೆನಲವರು,
ಹಣವುಳ್ಳ ಬಾಲಕನು ನುಡಿದನಿಂತು—

—ನಾನು ಹೊಡೆಯುವನಲ್ಲ ಹಣವು ಹೊಡೆಯಿಸಿತಯ್ಯ
ಏನುಮಿಲ್ಲದೆ ಹಣದ ಛಲದಿ ಮಲೆತು,
ನಾನಿಂತು ಗೈದೆನ್ನೆ ನಿನ್ನಾಣೆಯೆಂದೆನುತೆ
ಮೌನದಿಂದಲಿ ಪೇಳಿ ಪೋದನವನು !—

(೩)

—ಭಾವಿಸದೆನಿಂತು ಕಡು ಬಡತನದ ಸೂಕ್ಷ್ಮವನು
ಭೂವಲಯದಾಟಗಳ ತಿಳಿದೆನಾಗ,
ಯಾವ ಭಾಗ್ಯವೆ ಬರಲಿ ಯಾವ ಬಡತನವಿರಲಿ,
ಈ ವಿಷಮ ವರ್ತನೆಯ ದುಗುಡವೇಕೆ?

ಕಾಸಿಲ್ಲದಿರೆ ಹೊಟ್ಟೆಗಿಲ್ಲದಿಹ ಬಡತನವು,
ಕಾಸಿರಲು ಪರರನ್ನು ನೋಯಿಸುವ ಛಲವು!
ಈಸು ವಿದ್ಯೆಗೆ ವೇಷಭೂಷಣದ ವಿಭ್ರಮವು,
ಸೂಸುವೊಡೆ ಮಿತಿಯುಂಟೆ ಬಡತನಕ್ಕೆ!

ಬಡತನದಿ ಹಂಬಲಿಸಿ ಹಲುಬದವರಾರಿಹರು
ಕಡು ದುಗುಡದಿಂದಲೀ ಭೂತಳದಲಿ?
ಜಡರು ಮಾನವರೆಂಬ ಪಟ್ಟವಾಂತಿರುವನಕ
ಬಿಡುವುದೇ ಬಡತನವು ಭೂತಳವನು!

ಇಲ್ಲದನು ಬಯಸುವೆವು ಒಲ್ಲದನು ನೆನಸುವೆವು,
ಎಲ್ಲವನು ಬೇಕೆಂದು ಹಂಬಲಿಪೆವು!
ಪೊಲ್ಲಹವ ನುಡಿಯುವೆವು ಕಡಿದಾಡಿ ಮಡಿಯುವೆವು,
ಎಲ್ಲಿ ಪೋದಪುದಿನ್ನು ಬಡತನವಿದು!

ಚಿಂತೆಯೇ ಬಡತನವು—ಬಡತನವು ಪೆರತಿಲ್ಲ;
ಇಂತಿರಲು ಬಡವ ಬಲ್ಲಿದರೆಂಬುದುಂಟೆ!
ಚಿಂತೆಯನು ಬಿಟ್ಟವನು ಚಿನುಮಯಾತ್ಮಕನಯ್ಯ;
ನಿಂತ ನರಜೀವಿಗಳು ಚಿಂತೆಯುಳಿದಪರೆ?

———

# ಕರಗ

ಚೈತ್ರಶುದ್ಧ ಪೂರ್ಣಿಮೆಯ ರಾತ್ರಿ ಬೆಂಗಳೂರಲ್ಲಿ ನಡೆವ
ಶ್ರೀ ಕರಗ ಮಹಾಶಕ್ತಿಯ ಉತ್ಸವ ಚಿತ್ರ

(೧)

ದೀವಿಗೆಯ ದೀಪ್ತಿಯಿಂ ಕೀವಿದಲಜ್ಯೋಂಪಿಸಿಂ,
ಆವ ಶಕ್ತಿಯು ಮೊಗವ ತೋರಿ ಬರುತಿಹಳಿಲ್ಲಿ!
ಆವ ನವತೇಜದಿಂ ಕಲ್ಯಾಣಪುರವರಕೆ ದೇವಿ
ನಡೆತಂದಿರ್ಪಳು !—

ಈ ವಿಭವದೊಲವೇನು ಈ ಜನರ ಸಿರಿಯೇನು !
ಹಾವಭಾವದಿ ನೆರೆವ ದೇವಿ ದರುಶನದಿ ಮಿಗೆ
ಪಾವನತೆಯುಂ ತಳೆದು ಪ್ರೋಪ ಬೆಡಗೇನು !
ಅಲ್ಲಿ ಸೌಧಗಳಲ್ಲಿ ಸಿಚ್ಚಣಿಗೆಯುನ್ನೇರಿ,
ಸಲ್ಲಲಿತ ಭಾವದಿಂ ನೆರೆದ ಜನಸಂಕುಲವು
ಉಲ್ಲಸದಿ ನೆರೆ ನಿಮಿರಿ ನೋಡುತಿಹುದೇನು,
ಎಲ್ಲಿಹಳು ದೇವಿಯೆಂದು !—

ಕರಗೆ ಶಕ್ತಿಯ ಪೂಜೆಗೆತಿಹರುಷದಿಂ ತನ್ನ
ಮರಿಮುಕ್ಕಳೊಡಗೂಡಿ ಹೊರವಂಟ ಜನಕಾಯ
ನೆರೆಗೂಡಿ ಕಂಗೊಳಿಪ ಕಾಂತಿಯೇನು ?
ಪಟ್ಟಣದ ವೀಧಿಯಲಿ ನಿಟ್ಟಣಿಸಿ ನಿದ್ರೆಯಿಂ,
ಅಟ್ಟಹಾಸದಿ ಮಲಗಿ ಕೆಲರಿಹರು ಭ್ರಾಂತಿಯಿಂ;
ಕನಸಿನಲಿ ಕರಗವನು ಕಾಣುತಿಹರಿವರು !
ಕನಸಿನಲಿ ಕರಗಕ್ಕೆ ಕೈಮುಗಿದರಿವರು !

(೨)

ನೋಡಿಲ್ಲಿ 'ಗೋವಿಂದ, ಗೋವಿಂದ' ಎಂದು,
ಗೋವರ್ಧನನ ನಮಿಸಿ ನುಗ್ಗಿದರು ಮುಂದು!
ಪಾವುಡೆಯ ಹರಿಸಿನದ ಸ್ವಚ್ಛಂದ ಕಾಂತಿಯಲಿ
ಪೂಮಾಲೆಯುಂ ಧರಿಸಿ ಕೂರಸಿಯನಿರಿಸಿ,
ಸತ್ಯವೇ ವ್ರತವೆಂದು ಬದ್ಧಕಂಕಣರಾಗಿ,
'ಗೋವಿಂದ ಗೋವಿಂದ ಗೋವಿಂದ' ಎಂದು
ಗೋವರ್ಧನನ ನಮಿಸಿ ನುಗ್ಗಿದರು ಮುಂದು!—

ಕೆಲಬಲದಿ ಗೋವಿಂದ ನಾದಮಯವಾಗಿ,
ಚಲಿಸುತಿಹ ಗಂಭೀರ ಧವಳಾಂಗವೇನು?
ಅದು ಪರಮ ಧರ್ಮಜನ ದಿವ್ಯ ತೇಜಸ್ಸು!
ಅದು ನಿರುಪಮೋತ್ತುಂಗ ಕರಗದ ಮಹತ್ತು!

—'ಸೌಮಲ್ಲಿಕಾಮಾಲೆ, ತೊಳಪ ಕಂಗಳ ಲೀಲೆ,
ಸೋಮನಣಕಿಪ ಶೀಲೆ, ವಿಶ್ವಮೋಹನ್ನೆ!
ನೀ ಸತ್ಯ ಸಮಭಾವೆ, ನೀ ಭಕುತರನು ಕಾವೆ,
ವಿಶ್ವ ಸಂಪನ್ನೆ!—

ಇನಿತು ನುತಿಸುತೆ ಕರಗಮಾಶಕ್ತಿಗೆಲ್ಲಲ್ಲಿ,
ಕರವೆತ್ತಿ ನುತಿಪ ಪಾಠಕರಂದವೇನು!
ಇದರ ಪೂರ್ವೋತ್ತರವ ಬಲ್ಲವರದಾರು?—
ಜನರ ಕಥೆಯುಂತಿರಲಿ ಯುಗದ ಮಾತಿರಲಿ;
ನಿಜವಾರಿಗರಿವುಂಟು ನಂಬುವವರಾರು?
ಆದೊಡೀ ಕರಗವನು ಸದ್ಭಕ್ತಿಯಿಂದೆ
ಸಾದರದಿ ಮೆರೆಸುವರು ವಹ್ನಿಕ್ಷತ್ರಿಯರು—

(೩)

ಕರಗೆವನು ಪೊತ್ತು ಧರ್ಮಜನ ಪೂಜಾರಿ,
ಹೊರವಂಟು ಬರುತಿಹನು ಕೇರಿಗಳ ಸಾರಿ !
ಶಿರದಮೇಲಿರೆ ಕರಗೆ, ಹಸಿಯ ಮಣ್ಣಿನ ಕರಗೆ,
ಕರದಿ ಕೈಬಳೆ ಖಡ್ಗವಿಡಿದು ದೃಢವಾಗಿ
ಪೂಜಾರಿ ಬರುತಿಹನು ಕೇರಿಗಳ ಸಾರಿ ! —
—ಏಳುದಿನ ಉಪವಾಸ ಭಕ್ತಿಮಯ ಪೂಜೆ !
ಶೀಲತೆಯ ಸೊಬಗಿನಲಿ ಚೆಲುವಾಂತು ಬೆಳಗಿ
ಹಾರ ಅರಸಿನದುಡೆಯನುಟ್ಟು ಪಿರಿದಾಗಿ
ಪೂಜಾರಿ ಬರುತಿಹನು ಕೇರಿಗಳ ಸಾರಿ !—
—ಕೆಲಬಲದಿ ಗೋವಿಂದ ನಾದಮಯವಾಗಿ,
ಚಲಿಸುತಿಹ ಗಂಭೀರ ಧವಳಾಂಗವೇನು ?
ಅದು ಚೈತ್ರರಥವೇರಿ ಪೊರಮಡುವ ಸುಗ್ಗಿ !
ಅದು ಧರ್ಮದೇವತೆಯ ದಿವ್ಯಾಂಗ ಸಿದ್ಧಿ !—

—ಬನ್ನಿ ಕೆಳೆಯರೆ ತನ್ನಿ ಮಂಗಳಾರತಿಯ,
ರನ್ನಪದಕವ ತನ್ನಿ ಚಿನ್ನದುಡುಗೊರೆಯ !
ಗಂಧಪುಷ್ಪದಿ ಬನ್ನಿ, ನಾರಿಕೇಳವ ತನ್ನಿ,
ಪರಮ ಮಂಗಳ ದೈವಭಕ್ತಿಯಲಿ ಬನ್ನಿ !
'ಓಂ ನಮೋ ನಾರಾಯಣಾ' ಎಂದು ಸಾಗಿ
ಉನ್ನಮಿತ ಹಸ್ತದಿಂದೊಲಿದು ತಲೆವಾಗಿ !
ಮಾನವರ ಲೀಲೆಯಿದೊ ಪಾವನರ ಪುಣ್ಯವಿದೊ,
ನಮಗೇಕೆ—ಭಕ್ತಿಯಿಂ ಗೈದುದೇನಿರಲಿ ;
ಅದೆ ನಮ್ಮನುದ್ಧರಿಪ ದಿವ್ಯ ತೇಜಸ್ಸು !
ಅದೆ ನಿರುಪಮೋತ್ತುಂಗ ಕರಗದ ಮಹತ್ತು !

# ಮಧುಮಾಸ

ಸೃಷ್ಟಿಯೇ ಸೊಗವಾಂತು ತೋರ್ಪುದೀ ಮಧುಮಾಸ !
ತುಷ್ಟಿಯಂ ಪಸರಿಪ ವಸಂತನೊಳ್ಪಿನಹಾಸ !
ಇಷ್ಟಫಲಗಳ ನೀವ ಸುಗ್ಗಿಯಾವಾಸ !
—ಏನಿದೇನಿದು ಮಿಸುಪ ವೈಭವದ ಸುಗ್ಗಿ !—
ಭಾಸುರಾಂಗದ ಸುಗ್ಗಿ ತೋಷತಣ್ಪಿನ ಸುಗ್ಗಿ,
ಮಾಸಲರಿಯುರಿಯುದ ಸುಗ್ಗಿ ಮಿಾಸಲಾಗಿಹ ಸುಗ್ಗಿ,—
—ಭೂಷಣಕೆ ಭೂಷಣವ ಸೊಗಯಿಸುವ ಸುಗ್ಗಿ,
ಸೂಸಲಮ್ಮದ ಸುಗ್ಗಿ ಬಂದಿತದು ಹಿಗ್ಗಿ !

ಫಲಿತ ಮಾವಿನ ತರುವೆ ಪೂತ ಹೊಂಗೆಯ ಮರವೆ
ತಳಿತ ಹುಣಿಸೆಯೆ ವಿಮಲ ಜಾಜಿ ಚೆಲುವೆ,
ಫಲತರದ ವೃಕ್ಷಗಳೆ ತರುಲತಾದಿಗಳೆ,
—ಏನಿದೇನಿದು ಸೊಬಗು ನಿಮ್ಮ ನಾಡಿನಲಿ !—
ಆವ ರಾಜನ ನೋಡಲೆಳಸುತಿರುವಿರಿ ನೀವು !
ಆವ ಲೋಕದ ಕಾಂತಿವೆಳಗಿ ನಲಿವಿರಿ ನೀವು !—
—ಕಾವದೇವನ ಕೃಪೆಯ ತೋರಿ ಭುವಿಯಲ್ಲಿ
ಪಾವನತೆಯಂ ತಳೆದು ನರ್ತಿಸುವಿರೇನ್ನೆ !

ಎಲೆ ಮತ್ತ ಕೋಗಿಲೆಯೆ ಎಲೆ ದುಂಬಿವಿಂಡೆ,
ಎಲೆ ಶುಕವೆ ಅರಸಂಚೆ ಬಕ ಚಕೋರಗಳೆ,
ಒಲವಿಂದೆ ಸಂಚರಿಪ ವಿಹಗ ಸಂತತಿಯೆ,
—ಏನಿದೇನಿದು ಸೊಬಗು ನಿಮ್ಮ ನಾಡಿನಲಿ !—

ಆವ ಶಾಂತಿಯ ಸಿರಿಯನಪ್ಪಿ ನಗುವಿರಿ ನೀವು!
ಆವ ಸೊಬಗನು ಮೆಚ್ಚಿ ಸೊಗವನಾಂತಿರಿ ನೀವು!—
—ಜೀವ ಸೌಂದರ್ಯವನು ತೋರಿ ಜಗಕೆಲ್ಲ
ಹಾವಭಾವವ ಸೂಸಿ ಗಮಿಸಿರುವಿರೇನೈ!

ಮಾರುತನೆ ಭಾಸ್ಕರನೆ ನೀಲಗಗನವೆ ಮುಗಿಲೆ,
ತಾರೆಗಳೆ ತಂಗದಿರೆ ಮುಂಗಾರ ಕುಡಿಮಿಂಚೆ,
ಓರಂತೆ ಕಂಗೊಳಿಪ ಪಂಚಭೂತಗಳೆ!

—ಏನಿದೇನಿದು ಸೊಬಗು ನಿಮ್ಮ ನಾಡಿನಲಿ!—

ಆವ ಸುಖಸಾಮ್ರಾಜ್ಯಕಿಂತು ಕುಣಿವಿರಿ ನೀವು,
ಆವ ಬ್ರಹ್ಮಾನಂದಕಿಂತು ಮೆರೆವಿರಿ ನೀವು!—
—ಅಪ್ರತಿಮ ಕಾಂತಿಯಿಂದ್ವೈತಂದು ನಿಂದು
ಸುಪ್ರತಾಪವ ಸೂಸಿ ಬೆಳಗಿರುವಿರಿಂದು!

ಮಳೆಗಾಲಕಿಲ್ಲದಿಹ ಚಳಿಗಾಲವರಿಯದಿಹ,
ಉಳಿದಾವ ಋತುಗಣಕೆ ನಿಲುಕದಿಹ ಸೊಬಗು,
ಇಳೆಯ ಸಂಪದವೆನಿಪ ತೋರಸೊಬಗು!

—ಏನಿದೇನಿದು ಸುಗ್ಗಿ ನಮ್ಮ ನಾಡಿನಲಿ!—

ಆವ ಖಗ ಮೃಗ ಪಂಚಭೂತಗಳ ಮೆರೆಸಿ,
ಆವ ತರುಲತೆಗೂಡಿ ಸುಗ್ಗಿ ಸಿರಿಯೆನಿಸಿ,
—ಕಬ್ಬಿಗರ ಚಿತ್ರಿಕರ ಶಿಲ್ಪಿಗಳ ಮನಕೆ
ಉಬ್ಬಿಸಿಹುದಾನಂದ ವರ ಲಲಿತಕಲೆಗೆ!



# ಸ್ತ್ರೀ



ಹಿಂದಿನ ಮುಂದಿನ ದಾರಿಯ ಸಂಧಿಸಿ ನಿಂದಿಹಳಾರೀ
ಸುಂದರಿಯು !
ಪಾದಪಯೋರುಹ ನಾದ ಮನೋಹರ ಮೋದದೊಳಿಹಳೀ
ಸೋದರಿಯು !—

—ಚಂದಿರನಂದದಿ ನಗುವುದು ಕೆನ್ನೆ,
ಬಂಧುರ ಕಂಗಳ ಮಿಂಚಿನ ರನ್ನೆ,
ಇಂದಿನ ಭವದಲಿ ಬಂದಿಹಳು !
ವಂದಿಸಿ ದೇವರ ನುತಿಸುವಳು !

ಬೊಮ್ಮನ ವಿಶ್ವವಿಲಾಸದಿ ಜನಿಸಿದ ಸುಂದರತಮನಾರಿ !
ಭುವಿಯಾನಂದದ ಲಹರಿಯೊಳನುದಿನ ಸಂಭ್ರಮಿಸುವೆ
ತೋರಿ !—

—ಏನಿದು ನಿನ್ನಯ ವಿಶ್ವವ ಸೆಳೆವ
ಮನೋಹರ ಪ್ರೇಮದ ಧಾರೆಯಿದು,
ಮಹೋನ್ನತ ಸಂಪದ ವಾರಿಯಿದು,
ನಿವೇದಿತ ಶಾಂತಿಯ ಸಾರವಿದು—

ಕಟ್ಟದ ಕಾಲನ ಮೃತ್ಯುವ ಗೆಲಿದಾ ಸಾವಿತ್ರಿಯೆ ನೀನು ?
ಕಟ್ಟಡವಿಯೊಳಿರೆ ಕಾಂತನ ಪೂಜಿದ ಸೀತೆಯು ನೀನೇನು ?

ಕರುಣವ ತೋರಿಸಿ ಮನವನು ಸೆಳೆಯುವ ಬಗೆಯನು ನೀಬಲ್ಲೆ!
ದುರುಳರ ದೋಷಕೆ ದುಷ್ಫಲವಿಯ್ಯುತೆ ಶಿಕ್ಷಿಪೆ ನೀನಿಲ್ಲೆ !
—ನಿನ್ನನು ಮೋಹಿಸಿ ನಿರ್ಮಿಸಿದಾತನು
ರನ್ನದ ಕಾಂತಿಯು ತಂದಿರಿಸಿ,
ಪೊನ್ನಿನ ಲಲಿತೆಯನಾಶ್ರಯಿಸಿ,
ಪೆಂಪಿನ ವಾಣಿಯನನುಗೊಳಿಸಿ—
ಮಧುರದಿ ಕೌಶಿಕಮುನಿಯನು ಸೆಳೆದಾ ಮೇನಕೆಯೋ ನೀನು ?
ಸದನದೊಳಿಂದ್ರನ ನಾಟ್ಯದಿ ಒಲಿದಾ ರಂಭೆಯು ನೀನೇನು ?
ಅಡವಿಯನೆರಳಲಿ ಜಡೆಯನು ಬೆಳೆಯಿಸಿ ಕುಳಿತಿಹಋುಷಿಯಾರು!
ಪೊಡವಿಯ ತಳದಲಿ ನಾರಿಯ ಕೊಲ್ಲುವ ಕುಟಿಲಜನಿವನಾರು !
—ಮೌನದಿ ಮೆರೆವನು ತತ್ವಜ್ಞಾನಿ;
ಹೆಂಗಳ ಮುಟ್ಟನು ನಿರ್ಮಲಪಾಣಿ;
ಬ್ರಹ್ಮಚರ್ಯವನು ಧರಿಸಿಹ ಮೌನಿ;
ಹೆಂಗಳ ಕೆಡಿಸುವ ಪುಂಗವ ಪ್ರಾಣಿ—
ಗೌತಮಋುಷಿಯನು ವರಿಸಿದ ಸಾಧ್ವೀ-ಅಹಲ್ಯೆಯೋ ನೀನು ?
ಯೋಗಿಅಗಸ್ತ್ಯನ ಪ್ರಿಯಸತಿ ಲೋಪಾಮುದ್ರೆಯು ನೀನೇನು?
ಎಲ್ಲರು ನಿನ್ನಯ ಗರ್ಭದಿ ಜನಿಸುತೆ ನಿನ್ನನು ಜರೆಯುವರೆ !
ಬಲ್ಲವರೆನ್ನುತೆ ಮಾತೆಯ ಮರೆಯುವರೆಲ್ಲರು ಮಾನಿತರೆ !
—ಮೌನವ ಧರಿಸುತೆ ಕುಳಿತಿಹುದೇನು,
ಹೆಂಗಳ ಕುಲವನು ಮುಟ್ಟದುದೇನು,
ಬ್ರಹ್ಮಚರ್ಯವನು ಧರಿಸಿಹುದೇನು,
ಹೆಂಗಳ ಶೀಲವ ಕೆಡಿಸುವುದೇನು—
ರಾಮಭಕ್ತ ಹನುಮಂತನ ಪಡೆದಾ ಅಂಜನೆಯೋ ನೀನು ?
ವೀರ ವಿನುತ ಪಾಂಡವರನು ಪೆತ್ತಾ ಕುಂತಿಯು ನೀನೇನು ?

ಸ್ತ್ರೀಪುರುಷರ ಸಮಭಾವದಿ ಮೆರೆವುವು ಜಗದಲಿ ಜೀವಿಗಳು ;
ಕಾಪುರುಷರು ಮೂಲೋಕದೊಳಿರೆ ದುಷ್ಕರ್ಮವನೆಸಗುವರು ;
—ಸ್ತ್ರೀಯೆನೆ ಸವಿಯುವ ತನಿವಣ್ಣೆ ?
ಸ್ತ್ರೀಯೆನೆ ಮುಡಿಯುವ ಕಮ್ಮಲರೆ ?
ಸ್ತ್ರೀಯೆನೆ ಬಿಸುಡುವ ಕಡುಕಸವೆ ?
ಸ್ತ್ರೀಯೆನೆ ಸಂಕಟಕಾರಿಣಿಯೆ ?—
ರಾಜ್ಯದ ದರ್ಪವನುಳಿಸಿದ ಬಾಯಿಬಾ ಹೋಳ್ಕರೆಯೋ ನೀನು !
ರಾಜ್ಯವ ಶೌರ್ಯದಿ ಆಳಿದ ಸುಲ್ತಾನ್ ರೆಜಿಯಳು ನೀನೇನು !

ಹಿಂದಿನ ಮುಂದಿನ ಹಾದಿಯ ಸಂಧಿಸಿ ನಿಂದಿಹಳಾರೀ
ಸುಂದರಿಯು !
ಪಾದಪಯೋರುಹ ನಾದ ಮನೋಹರ ಮೋದದೊಳಿಹಳೀ
ಸೋದರಿಯು !—
—ಸಾಗರ ಮಧ್ಯದಿ ಜನಿಸಿದ ಲಕ್ಷ್ಮಿ,
ಯೋಗದಿ ಜಗವನು ಕಾಯುವ ಮಾಯಿ,
ರಾಗದಿ ವಿದ್ಯೆಯ ಗಳಿಸಿದ ವಾಣಿ,
ಭೋಗವನೀಯುವ ಬೆಡಗಿನ ರಾಣಿ—
ಇಂದಿನ ಭವದಲಿ ಬಂದಿಹಳು !
ವಂದಿಸಿ ದೇವರ ನುತಿಸುವಳು !

———



*

# ಬಾಲ ವಿಧವೆ

(೧)

ಆರಿವಳು ಕೂಪದೆಡೆಯಲ್ಲಿರುವ ಕುವರಿ !
ಸಾರಲೇಕಿಂತಿಲ್ಲಿ ನಡುವಗಲಿನಲ್ಲಿ ?—
—ತುರುಬಿನಲಿ ಪೂವಿಲ್ಲ,
ಫಣೆಗೆ ಕುಂಕುಮವಿಲ್ಲ,
ಕೈಯ ಬಳೆಯೊಂದಿಲ್ಲ !—
ಏನಿದೇನಿದು ಕೊರಳ ಮಾಂಗಲ್ಯವಿಲ್ಲ !

ಎಳೆವೆಣ್ಣು ಸಿರಿಮೊಗದ ನಳಿತೋಳ ನಾರಿ !
ಕಳೆಗುಂದಿ ಕುಳಿತಿಲ್ಲಿ ಕಡುನೊಂದು ಮನದಿ,
—ವೀರಗಚ್ಚೆಯ ಕಟ್ಟಿ,
ಕಂಗಳೆರಡನು ಮುಚ್ಚಿ,
ಕರವ ಮೇಲಕ್ಕೆತ್ತಿ,
ಮನಮುಟ್ಟಿ ಬೇಡುತಿಹ ವರವದೇನು ?

ನಮ್ಮೂರ ಕಡುಸಿರಿಯ ಕಾಂತರಾಯನಿಗೆ
ಒಮ್ಮನದೊಳೆಸೆದಿರ್ದ ಕುಲಕಾಂತೆ ಇವಳು !
—ಕಾಂತರಾಯನು ಮಡಿಯೆ,
ಕಾಲಗತಿಯನು ಪಡೆಯೆ,
ತನಗೆ ಗತಿಯಾರೆಂದು ತವರೂರ ಸಾರಿ,
ಅನುದಿನವು ಮನದಿನಿಯನನು ಬಯಸಿ ಬೇಡಿ,
ಚಿಕ್ಕ ಪ್ರಾಯದ ವಿಧವೆ-ಹದಿನೈದು ವರುಷ,
ಇನ್ನೈದು ವರುಷವನು ಕಳೆದಳಿಂತು !—

—ತಂದೆತಾಯ್ಗಳು ಮಗಳ ಸೇವೆಯಿಂ ತಣಿದು
ತೃಪ್ತರಾದರು-ಮಗಳ ಮನವನರಿಯುವರೆ !
ಬಾಹ್ಯವನು ನಂಬಿ ಮರುಳಾದ ಮಾನವರು
ಅಂತರಂಗದ ಪ್ರಕೃತಿವಿಡಿದು ನಡೆಯುವರೆ !

ಎಳಗುವರ ವಿಧುರನಾದೊಡೆ ಮದುವೆಯೇಕೆ ?
ಎಳಗುವರಿ ವಿಧವೆಯಾದೊಡೆ ಮರಣವೇಕೆ ?
ಶಿರದ ಮುಂಡನದಾಟ ಒಪ್ಪೊತ್ತಿನೂಟ,
ದಾಸಿಯಾಗಿಹ ಮಾಟವಿದು ನಮ್ಮ ನೋಟ !
ಹದಿನೈದುವರುಷದಲಿ ವಿಧವೆಯಾಚೆಲುವೆ
ತಾಯಿತಂದೆಯ ನೆರೆಯೊಳಿಂತು ಬಳಲಿದಳು !
ಲೋಕರೂಢಿಯು ನಡೆಸಬೇಕೆಂದರವರು !—

(೨)

ಬೆಳಗಾಯಿತೊಂದುದಿನ ; ಹೃದಯವೇದನೆಯು
ತಂಪಾದುದಾಬಾಲೆ ದೇವರನು ನೆನೆದು !
ಪೇಳಿದಳು ಮುಂದಿರುವ ಪಾತ್ರೆಗಳ ಕುರಿತು ;
— ನೀವೇಕೆ ಚಿಂತಿಸುವಿರೆಲೆ ಪಾತ್ರೆಗಳಿರಾ !
ನರರ ಕೋಟಲೆಯಲ್ಲಿ ಸವೆದು ನೀವುಗಳು
ವಿಶ್ವದಲಿ ಸೇರುವಿರಿ ಸ್ವಾತಂತ್ರ್ಯರಾಗಿ !—

—ಹಿಂದಾದ ಮದುವೆಯಲಿ ನಡೆದ ಸಂಭ್ರಮದ
ಸೊಬಗನೆಲ್ಲವ ನೆನೆದು ಇಂದಾದ ಪರಿಯು
ನೋಡಿ ಚಿಂತಿಸಿ ಅಂದಿನುಡುಗೆ ತೊಡುಗೆಗಳ,
ಬಳುವಳಿಯ ಗೋವುಗಳ ಸಡಗರದ ನುಡಿಯು,
ಬಳಗದವರಾಡಿದಾ ಮುದ್ದು ಮಾತುಗಳ,

ಮಲ್ಲಿಕಾ ಮಾಲೆಗಳ ಗಂಧ ಪನ್ನೀರ
ಸೇಚನೆಯ ಸೊಬಗೆಂದು ಕಣ್ಣೆದಿರಿಗಿರಲು,
ಅಶ್ರುಧಾರೆಯ ಹೊಳೆಯು ಹಿಂದಿನೈಸಿರಿಯು
ಕೊಚ್ಚಿದುದು ಕಿಚ್ಚಿನಲಿ ಬೆಂದುದಾ ಮೋಹ !
ನಿಂದುದಾ ಮಾಂಸಮಯ ನಶ್ವರದ ದೇಹ !—

—ದುಗುಡವನು ಬಿಗಿಹಿಡಿದು ಧೀರೆ ಗಂಭೀರೆ !
ಮನೆಗೆಲಸವನ್ನೆಸಗಿ ಮರಿಮಕ್ಕಳೆಲ್ಲ
ತಣಿವಂತೆ ಭೋಜನವನಿಟ್ಟು ಸಂತವಿಟ್ಟು,
ನೀರಿಲ್ಲವೆಂದರಿತು ನೀರ ತರಲೆಂದು
ಕೊಡನ ಕೈಯಲಿ ಪಿಡಿದು ತನ್ನ ಬೇಗೆಯನು
ತಣಿಸುವಾಕೂಪದೆಡೆ ಬೇಡುತಿಹಳಿಂದು !—

(೩)

' ಹೃದಯೇಶ ನೀನೆನ್ನ ಬಳಿಗೈದಲಾರೆ !
ನಾನೆ ಬರುವೆನು ನಿನ್ನ ಬಳಿಗೆ ಬಾ '-ಎನುತೆ,
ಪಾಪನಾಶಿನಿಯಾದ ಗಂಗೆಯಲಿ ಮಿಂದು,
ಅಶ್ವತ್ಥಕಟ್ಟೆಯನು ಬಲಗೊಂಡು ನಿಂದು,
ತುಲಸಿಯನು ಸೇವಿಸುತೆ ವರುಣನೆಡೆಗೊಂಡು,
ಪತಿಗಾಗಿ ಪರಲೋಕಯಾತ್ರೆ ಮಾಡಿದಳು ! —

ಆದೊಡೇನೆಂದಿದನು ಮೂದಲಿಸಲೇಕೆ ?
ಪಾಪಕೆಳಸಿದಳಿಲ್ಲ ; ಮಾಂಸಮಯ ದೇಹ
ಲೋಕರೂಢಿಯ ಕಟ್ಟನೊಡೆಯಲಿಂತಾಯ್ತು !

—ದೈವಭಕ್ತಿಯೊಳಾಕೆಗಾರು ಸರಿಯುಂಟು !
ಚಿತ್ತಶುದ್ಧಿಯೊಳಾಕೆಗಾರು ಮಿಗಿಲುಂಟು !
ಮನೆಗೆಲಸದಲ್ಲಾಕೆ ಮಿಗಿಲಾದ ಜಾಣೆ !
ಕಾಯಶಕ್ತಿಯೊಳಾಕೆಗೆಣೆ ಯಾರ ಕಾಣೆ !
‘ ನಾನೆ ಬರುವೆನು ನಿನ್ನ ಬಳಿಗೆ ಬಾ ’ ಎನುತೆ
ಪತಿಗಾಗಿ ಪರಲೋಕ ಯಾತ್ರೆ ಮಾಡಿದಳು ! —
—ಆಲ್ಲೊರ್ವ ಯುವಕನಿದ ಕಂಡೋಡಿ ಬಂದು,
ನೋಡಿದನು ಬರೆದಿಟ್ಟ ಲಿಖಿತವನು ನಿಂದು ;
‘ ಲೋಕರೂಢಿಯ ಬಲೆಯ ಹಬ್ಬಿದವರಾರು !
ತಾವು ಹಬ್ಬಿದ ಬಲೆಯ ಸಿಕ್ಕಿನಲಿ ಸಿಲುಕಿ,
ಮೋಸಗೊಂಡಿಹ ನರರ ಬಿಟ್ಟೆನೆಂದು ! ’

ಇದ ನೋಡಿ ನವಯುವಕನೆದೆಯು ತಟ್ಟಿದನು !
ಬೆದರದಲೆ ಬಾಲೆಯನು ಧುಮಿಕಿ ಸಲಹಿದನು !
ಬಾಲ ವಿಧವೆಯ ದುಗುಡಕಾರು ದಿಕ್ಕೆಂದು,
ಹೃದಯದಲಿ ನಿರ್ಧರಿಸಿ ನುಗ್ಗಿದನು ಮುಂದು !

---

# ಕೂಸು



ಬಾಳಿನ ಕಡಲಿನ ಮೇಗಡೆ ಮಿನುಗುವುದೇನಿದು ಕೌತುಕವು !
ತೀವಿದ ಕಾಂತಿಯು ಚಂದಿರನಂದವನಣಕಿಪ ಚೋದ್ಯವಿದು !
ಮಿನುಗುತೆ ಮಿನುಗುತೆ ಬರುತಿಹುದಲ್ಲಿ
ಭವಜಲರಾಶಿಯು ಕೇಳಿಯಲಿ !
ಮುದುಕರು ಬಂದರು ಮಿಗಿಲಾಗಿ
ಉದಿಸಿದ ಮೋಹದಿ ತಲೆದೂಗಿ !
ಧನಿಕರು ಹೆಣೆದರು ಹೊನ್ನಿನ ಹಾಸುಗೆ
ಘನ ಸಂಸಾರದ ಕೂಸಿನ ಆಸೆಗೆ !
ಮಕ್ಕಳ ಪಡೆಯದ ಮನ್ನೆಯರಾಗೆ
ಅಕ್ಕರೆಯಿಂದಲಿ ನೆರೆದರು ಬೇಗ !
ಇದಿಗೊ ಮಿನುಗಿತು ಜಲಧಿಯು ತಾರೆ !
ಇದಿಗೊ ಮೊಳಗಿತು ಸಂತಸಧಾರೆ !

—ಕೂಸಿನ ಭ್ರಾಂತಿಯು ಬಲ್ಲವರಾರು,
ಆಸೆಯು ಮೋಸವನರಿತವರಾರು ?
ಒಡನೆಯೆ ಸಂದಣಿಯೆರಗಿತು ಭರದಲಿ
ಕಡಲಲಿ ಮುಳುಗುತೆ ಕೂಸೆಂದು !
ಬೇಡಿದರೆಲ್ಲರು ಕರಗಳ ನೀಡಿ,
ರೂಢಿಯು ಕರ್ತನ ಕೃಪೆಯನು ಬೇಡಿ—

—' ಲೋಕವನಾಳುವ ನಚ್ಚಿನ ಕೂಸೆ,
ನಾಕವ ಮೀರಿದ ಭಾಗ್ಯದ ಕೂಸೆ,
ಶೋಕವ ನೀಗುವ ಸೊಗವಿನ ಕೂಸೆ,

ಸೌಖ್ಯವ ತುಂಬುವ ಸುಗ್ಗಿಯ ಕೂಸೆ,
ಜೀವಿತ ಯಾತ್ರೆಯ ಜಯಿಸುವ ಕೂಸೆ,
ಭಾವಿತ ಫಲಗಳ ಸಲಿಸುವ ಕೂಸೆ,
ತೀವಿದ ಕೋಮಲ ಕಾಂತಿಯ ಕೂಸೆ,
ಸಾವನು ಮರೆಸುವ ಮಾಯದ ಕೂಸೆ,
ಭವಸಾಗರದಲಿ ತೇಲುವ ಕೂಸೆ,
ಅವನಿಯನಾಳುವ ಶಕ್ತಿಯ ಕೂಸೆ,
ಅವಧರಿಸೆಮ್ಮಯ ಮನವನು ಕೂಸೆ,
ಸವನಿಸು ಸುಖವನು ಸೊಬಗಿನ ಕೂಸೆ! '—

ಎಂದುರೆ ಪಾಡುವ ಸಂದಣಿಯಿದ್ದಿತು ಭ್ರಾಂತಿಯಜಲಧಿಯಲಿ;
ನಿಂದಿತು ನಭದಲಿ ಕೂಸಿನ ವಾಣಿಯು ನುಡಿದುದು
ಮೋದದಲಿ—

—' ಶಕ್ತರು ಶಕ್ತರು ನೀವುಗಳೆಲ್ಲ
ಭಕ್ತರೆ ಭಕ್ತರೆ ಕೇಳಿರಿ ಸೊಲ್ಲ—
ಯುಕ್ತವತಿಳಿಯುವ ಬಾಳಿನಭಕ್ತಿಯ ಮೆಚ್ಚುತೆ ನಾಬರುವೆ !
ಯುಕ್ತವ ಮರೆಯುವ ಶಕ್ತಿಯ ನೀಗುವ ಯುಕ್ತಿಯ ನಾ
ಬಿಡುವೆ !

—ಎನುತಲಿ ಮಾಯದ ತೆರೆಯಲಿ ಮುಳುಗಿತು ಮುಕ್ತಿ
ಯೊಳಾಕೂಸು,
ಘನತರ ಬಾಳಿನ ಯುಕ್ತವ ತಿಳಿಯಲು ನಿಂತರು ಜನರಿಂತು !



8

# ಪತಿಭಕ್ತಿ



ವರ್ಡ್ಸ್‌ವರ್ತ್ ಮಹಾಕವಿಯ " Laodamia " ಎಂಬ
ಕವಿತೆಯ ತಾತ್ಪರ್ಯ

(೧)

—ಬಾ ವಲ್ಲಭನೆ ಮರಳಿ ನಿನ್ನ ಕಾಣುವುದೆಂತು,
ಮುದ್ದಾಡಿ ನಲಿವುದೆಂತು !
ಅನುದಿನವು ನಿನ್ನನೇ ನೆನೆದು ಚಿಂತಿಸುತಿರುವೆ,
ಎನ್ನೊಡೆಯ ಬರಬಾರದೆ !

ದೇಶಸೇವೆಗೆ ನೀನು ಕಾಳಗದಿ ಮಡಿದೆಯ್ಯೆ
ಕೈವಲ್ಯ ನಿನಗಾದುದು !
ದಾರುಣದ ಬಾಳೆನಗೆ ಸಾಕು ಸಾಕೈ ರಮಣ
ನರಕ ಯಾತನೆಯಾದುದು !

ಅರಮನೆಯು ಎನಗೇಕೆ ಭೋಗ ಭಾಗ್ಯಗಳೇಕೆ,
ತೋಟತುಡಿಕೆಗಳೇತಕೆ ?
ನಿನ್ನ ನೋಡುವ ಭಾಗ್ಯವೆನಗೆ ಬರಬಾರದೇ,
ಹೇ ನನ್ನ ಸ್ವಾಮಿ ಬಾರೈ !—

—ಎಂದು ಲಲಿತೆಯು ತನ್ನ ಕರಗಳನು ನೀಡುವಳು
ಗಗನಕ್ಕೆ ಕೈಯ್ಯ ಚಾಚಿ !
ಕಣ್ಣ ಮುಚ್ಚುವಳು ಭೂಮಿಯಮೇಲೆ ಬೀಳುವಳು
ಕಣ್ಣೀರ ಮಳೆಯ ಸುರಿಸಿ !

(೨)

ಒಂದು ದಿನ ತೋಟದಲಿ ಒರ್ವಳೇ ನಿಂತಿರಲು
ನಿಜಪತಿಯು ಬರುವನೆಂದು,
ಕಣ್ಣೀರ ಮಂಜಿನಲಿ ಕಂಡಳಾ ರಮಣಿ ತ
ನ್ನೊಡೆಯನನು ಬೆದರಿ ನಿಂತು !

ನೆರಳಿನೋಪಾದಿಯಲಿ ನಿಂತು ನೋಡಿತು ವ್ಯಕ್ತಿ
ಲಲಿತೆಯನು ನಗುತಲಾಗ ;
ಕತ್ತೆತ್ತಿ ನೋಡಿ ನಿಜರಮಣನೆಂಬುದ ನರಿತು
ಬಾಚಿ ತಬ್ಬಿದಳು ಬೇಗ !

ಇಂತು ಕರಗಳ ನೀಡಿ ಆಲಿಂಗಿಸಲು ಪೋಗೆ
ಕೈಗೆ ಸಿಕ್ಕದಲೆ ನಿಂತು ;
ವ್ಯಕ್ತಿ ಪೇಳಿತು ತನ್ನ ಪ್ರಿಯಸತಿಯೊಳೀತೆರದಿ
ಲಲಿತೆ ಬೆರಗಾದಳೆಂದು—

—' ನಿನ್ನ ಭಕ್ತಿಗೆ ಮೆಚ್ಚಿ ದಿವಿಜರೆನ್ನನು ಲಲಿತೆ
ಕಳುಹಿದರು ನಿನ್ನ ಬಳಿಗೆ ;
ಒಮ್ಮೆ ದರುಶನವಿತ್ತು ಬಾ ಪೋಗು-ಎನ್ನಲು
ಬಂದೆ ನಾನಿಂದು ಭುವಿಗೆ ;

ಮಿತವಿರಲಿ ಮೋಹತಾಪದ ಜ್ವಾಲೆಗೆಲೆ ರಮಣಿ
ಅದರಿಂದೆ ಹಿತವಪ್ಪುದು !
ನರರು ಮೆಚ್ಚುವರು ದೇವತೆಗಳೋಲಾಡುವರು
ಸರ್ವಾರ್ಥ ಸಿದ್ಧಿಯಹುದು !

ಇಂದು ನಿನ್ನಯ ಭಕ್ತಿಗೊಲಿದು ಬಂದೆನು ವನಿತೆ,
ವಿರಹತಾಪವಿದೇನಿದು ?
ದೇವತೆಗಳೆನ್ನ ಹಿಂದಕೆ ಕರೆಯುವರು ನೋಡು
ನಿನ್ನ ವೇದನೆಯು ತಿಳಿದು !

ಹೇ ನಾರಿ ನಿಶ್ಚಲದಿ ಭಕ್ತಿಪೂಜೆಯ ಮಾಡು
ಶುಭವಹುದು ಸಗ್ಗದಲ್ಲಿ !
ಇನ್ನಿರಲು ಅವಕಾಶವಿಲ್ಲ-ಎಂದಾಕ್ಷಣವೆ
ಪೋದನಾ ದೇಶಭಕ್ತ !

(೩)

ಆ ಪತಿವ್ರತೆ ಕಾಂತೆ ಲಲಿತೆ ದುಃಖಿಸಿ ತನ್ನ
ಮೂಢಮತಿಯನು ನಿಂದಿಸಿ,
ಜ್ಞಾನದೃಷ್ಟಿಯ ತೆರೆದು ತಿಳಿದು ನಿಜತತ್ವವನು
ಬಿದ್ದಳೈ ಧರೆಯೊಳಾಗ !—

—ಸತಿಪತಿಯು ವಿಮಲಾತ್ಮವೆರಡು ನಭದಲಿ ಸಾರಿ
ಸೇರಿದುವು ಭಕ್ತಿಯಲ್ಲಿ !
ಪತಿತ ಪಾವನ ದೇವ ದಿವ್ಯ ಸನ್ನಿಧಿಯಲ್ಲಿ,
ಬ್ರಹ್ಮಾಂಡ ಮುಕ್ತಿಯಲ್ಲಿ !

ಗ್ರೀಕ್ ಛರ್ಚದ ಕಠಿಣ ಸಂಪ್ರದಾಯಕ್ಕೆ ಸಿಕ್ಕಿ, ಕೆಲಕಾಲ ಮಾತ್ರ ಆಂಗ್ಲೇಯ ಮಹಾಕವಿಯು 'ಲೆವೋಡಮೀಯ' ಳ ಆತ್ಮವನ್ನು ನರಕಕ್ಕೆ ಕಳುಹಿಸಿದ್ದಾನೆ.



— ೭ —

# ದಣಿದ ಯಾತ್ರಿಕ

ಮಹಾಕವಿ ರವೀಂದ್ರನಾಥ ಠಾಕೂರರ "The Weary Pilgrim"
ಎಂಬ ಕವಿತೆಯ ಭಾಷಾಂತರ

ದಣಿದ ಯಾತ್ರಿಕ ನಾನು ತೆರಳುತಿಹೆ ನೀಧರೆಯ ಗಹ್ವರಗಳಲ್ಲಿ !
—ಕಲ್ಲೆದೆಯ ರಕ್ಕಸರ,
ಶೂನ್ಯ ಸಂಸಾರಿಗಳ,
ದುರ್ಗಂಧದಾರ್ಭಟದ,
ಭೂನಾಕವನು ಕೆಡಿಸು ಗವಿಗಳಲ್ಲಿ !—
ಜನ್ಮಕರ್ಮವ ದಹಿಸಿ ಭಸ್ಮರಾಶಿಯ ನೀವ ಕಿಬ್ಬಿಯಲ್ಲಿ !

ದಾರಿಯದು ಕಿರಿದಾಯ್ತು !
ದುರ್ಗಮವು ನಿಡುರಾತ್ರಿ !
ಹೆಬ್ಬಾಗಿಲೊಳು ನಂಬಲಾರದಲೆ ಶುನಕಗಳು
ಅಬ್ಬರಿಸುವುವು ಮನೆಗೆ ಬರುವ ಯಾತ್ರಿಕಗೆ !

ಮನ್ನಣೆಯ ಬಿಂಬವನು ಕಳುಹಿಂದು ರವಿನಾಥ !
ಪೂರ್ವದೇಶದಿ ಬಿಚ್ಚು ಹೊನ್ನಬಾಗಿಲನು !
ಅಲ್ಲಿ ಕಂಗೊಳಿಸಿಹುದು ಮಾನವನ ನಿಜತೇಜ,
ಮಣ್ಣಿಗಾಶ್ರಯವೀವ ಗೆರುಕೆ ಪಸಿರಂತೆ !—
ತಾರೆಯಡಿಗೆರಗುತಿಹ ಪರ್ವತಗಳಂತೆ !

* ಮಹಾಕವಿಯು ಹಿಂದೊಂದು ಸಲ ಪಶ್ಚಿಮದೇಶವಾದ ಅಮೇರಿಕಕ್ಕೆ ಹೋಗಿ ಪೂರ್ವದೇಶಕ್ಕೆ ಹಿಂದಿರುಗುವಾಗ ಬರೆದುದು. "Modern Review" ನಲ್ಲಿ ಪ್ರಕಟವಾಗಿದೆ.

# ಭ್ರಾಂತಿ ವಿಲಾಸ

ಮಾನವನೆ, ಸಚರಾಚರಗಳನು
ವರ್ಣಿಸುತೆ ನೆರೆ ನಲಿಯುವೆ !
ಅದರೊಳಡಗಿಹ ಶಕ್ತಿಯೊಂದನು
ಮರೆತು ಪಾಪವ ಗಳಿಸುವೆ !

ತಣ್ಣಗಾಗಲು ತಾಯಿತಂದೆಗೆ
ಛಾಗೆ ಸುಖವೆಂದುಲಿಯುವೆ !
ಮಣ್ಣು ಹೆಣ್ಣಿಗೆ ಹೊನ್ನಿನಾಸೆಗೆ
ತನ್ನ ದೇಹವ ಮಾರುವೆ !

ಸಾವ ಸಂಕಟದಲ್ಲಿ ಮಿಾರಿದ
ದೇವರೊಬ್ಬನ ತೋರುವೆ;
ಮತ್ತೆ ಬಾಳುವ ಭಾಗ್ಯವೊದಗಲು
ತಾನೆ ದೇವರು ಎನ್ನುವೆ !

ಜಾತಿಭೀತಿಯು ಜಿಡಗತೋರುತೆ
ನೀತಿ ನೆಯವನು ಮರೆಯುವೆ !
ಯುಕ್ತಿಯುಲಿ ಸ್ವಾರ್ಥತೆಯು ಗಳಿಸುತೆ,
ಭಕ್ತಿ ಮುಕ್ತಿಯು ದೂರುವೆ !

ದೇವರೆಲ್ಲಿಹನೆಂದು ಕೂಗುತೆ
ದೂರದೇಶವ ಬಳಸುವೆ !
ಕಂಡು ಕಾಣದ ಆತ್ಮಲಿಂಗವ
ತನ್ನ ಮನೆಯುಲಿ ಮರೆಯುವೆ !

---

# ಪಂಜರದ ಶುಕ



ಪಂಜರದಲ್ಲಿಹ ಶುಕವೇ ಪೇಳು
ನಿನಗೀ ಪಂಜರವಾಸವು ಹಿತವೆ ?
ನಿನ್ನನು ಮೋಹಿಸಿ ಪಾಲಿಪ ಮನುಜನ
ಪ್ರೇಮಕೆ ನೀ ನಲಿದಾಡುವೆಯಾ ?

ತಿಂಡಿಯ ಕೊಡುತಲಿ ಮಾತನು ಕಲಿಸಿ
ಚಂದದಿ ನಿನ್ನನು ಕೂಗುತಲಿರಲು,
ನೀನೇತಕೆ ಬೆದರುತೆ ದೆಸೆದೆಸೆಗೆ
ಓಡುವೆ ಪೇಳೆನಗೆರಗಿಣಿಯೆ ?

ನರರನು ಮೀರಿದ ಪೋಷಕನಿಹನೆ,
ಆತನ ಬಯಸುತೆ ಪಾರುವೆಯೇನು !
ಆತನು ನಿನ್ನನು ನರರಿಗೆ ಕೊಟ್ಟು
ಕೊಟ್ಟುದನೇತಕೆ ಬಯಸುವನು ?

ಬಾಳುವ ಕಾಲದಿ ಬಳಿಯಲಿ ಸುಳಿದು
ಮೋಸವ ಮಾಡಲು ಕಡೆಗಿದು ತರವೆ ?
ನಿನ್ನನು ನಂಬಿದ ಮನುಜಗೆ ಮುಕುತಿಯ
ಹಾದಿಯ ತೋರಲಿ ವರಶುಕವೆ !

ನಿನ್ನಯ ಪೋಷಕನಿರುವೆಡೆಗಾತನ
ಸೆಳೆಯುತೆ ಸದ್ಗತಿಗೈದುವ ತೆರದಿ,
ಗೆಳೆಯನ ಪ್ರೇಮಕೆ ಸಾಕ್ಷಿಯ ಪೇಳಿ
ಪಂಜರದೊಂದಿಗೆ ನೀ ತೆರಳು !

# ಕುಂಬಾರ



ಕುಂಬಾರನೆ ನೀ ಮಣ್ಣಿನ ಪಾತ್ರೆಯು
ತುಂಬುವೆ ಹೊಸಹೊಸ ರೂಪಿನಲಿ !
ಬೆಂಬಲವೇನಿದು ನಿನ್ನಯ ಗೊಂಬೆಯು
ಹಂಬಲವೇತಕೆ ಮಾಯೆಯಲಿ ?

ಜೇಡಿಯಮಣ್ಣಿಗೆ ಬೆರಸುತೆ ಜೀವನ
ಮಾಡಿದೆ ಮರಣದ ಗೊಂಬೆಯನು !
ಬಾಡುವ ದೇಹಕೆ ಬೆಳಗುವ ಜೀವನ
ಕೂಡುತೆ ಮೇಲೆಡೆಯಾಡುತಿಹೆ !

ಮುದ್ದಿನ ಗೊಂಬೆಯ ಮಾಡುವೆ ಲೋಕದಿ
ತಿದ್ದುವೆ ಶಾಂತಿಯ ತಂದಿಡುವೆ !
ಸದ್ದಿಲ್ಲದೆ ಯಮನೆಂಬುವ ದಂಡದ
ಗೆದ್ದಲವಾಗೆಲು ಕೈಬಿಡುವೆ !

ಇರುವನೆ ಯಮನೆಂಬುವ ಬೇರೊಬ್ಬನು
ಬರುವನೆ ತರುವನೆ ದಂಡವನು ?
ಪರಮಾಶ್ಚರ್ಯವು ನಿನ್ನನು ಮೀರಿದ
ಎರಡನೆ ಯಮನಾರೆಲ್ಲಿಹನು !

ಪುಡಿಪುಡಿಯಾದುವು ಪ್ರೀತಿಸಿ ಮಾಡಿದ
ಕುಡಿಕೆ ಮಡಿಕೆ ಮೊಗೆ ಗಡಿಗೆಗಳು !
ಸಡಗರದಿಂದವನೆಲ್ಲಿಗೆ ಕಳುಹಿದೆ—
ಬಿಡು ನಿನ್ನಾಟವು ಹಿತಕರವೆ ?

ಆರಿತು ಬೆಂಕಿಯ ಜೀವವು ತಣ್ಣಗೆ
ಸೇರಿತು ಮಾಯೆಯ ಸಿಕ್ಕಿನಲಿ !
ತೋರಿದೆ ಪುಡಿಯನು ಪುನರಪಿ ಮೆತ್ತಗೆ
ಮೀರಿದ ಗೊಂಬೆಯ ರೂಪಿನಲಿ !

ನೋವನು ತಿಳಿಯುವ ಕೋಮಲ ತನುವಿರೆ
ನೋವನು ತಡೆಯುವ ಬಲವಿಲ್ಲ !
ಭಾವದಿ ಸಗ್ಗವ ಚಿತ್ರಿಪ ಮನವಿರೆ
ಭಾವಿತ ಫಲವನು ಕೊಡಲಿಲ್ಲ !

ಧರ್ಮದ ಸೃಷ್ಟಿಗೆ ಪಿಡಿದಿಹ ದಂಡವ
ಕರ್ಮದ ನಿಯಮಕೆ ತೋರಿಸುವೆ !
ನಿರ್ಮಲಹೃದಯರ ಭಾಗ್ಯವು ನೀನೇ !
ಮರ್ಮವರಿಯದಿರೆ ನೀ ಬೇರೆ !

ಮನವಿದು ನಿರ್ಮಲವಾದೊಡೆ ದೇವಾ,
ಘನತರ ಜೀವಕೆ ಭಯವಿರದು !
ವಿನುತನೆ ಆಸೆಯ ಕಲ್ಮಷವಿರುವೊಡೆ
ಜನಿಸಿತು ಮರಣವು ಧಾತ್ರಿಯೊಳು !

1928 ಡಿಸೆಂಬರ್ 15 ನೆಯ ಶನಿವಾರ ಕರ್ಣಾಟಕ ಸಂಘದವರು ಸೆಂಟ್ರಲ್ ಕಾಲೇಜಿನಲ್ಲಿ ನಡೆಸಿದ ವಿದ್ಯಾರ್ಥಿ ಕವಿ ಸಮ್ಮೇಳನ ಸ್ಪರ್ಧೆಯಲ್ಲಿ ಪಾರಿತೋಷಿಕವನ್ನು ಪಡೆದ ಪದ್ಯ.

---

# ಕನ್ನಡ ದೇವಿ

ಬಾಳು, ಕನ್ನಡ ದೇವಿ ಬಾಳು ಧರಣಿಯಲಿ!
ಆಳು ಕನ್ನಡನಾಡ ಸಿರಿಯ ಸೋಹಿಯಲಿ—
ಮುನ್ನ 'ಪಂಪ'ನ ಪೆತ್ತು ಪೆಂಪ ನೀ ಪಡೆದೆ !
'ಪೊನ್ನ' ಮಕುಟವ ತೊಟ್ಟು ಹೊನ್ನನುರೆ ತಳೆದೆ!
'ರನ್ನ' ದುಡುಗೆಯನುಟ್ಟು ರತ್ನರಾಜಿಯೊಳೆಸೆದೆ !
ಕನ್ನಡಿಗರೊಡನಾಡಿ ಮುದವ ನೆನೆದೆ !
ವಿಜಯನಗರದಿ ಪೊಳೆದ ವೀರನುಡಿಯೆಲ್ಲಿ ?
ಚಾಳುಕ್ಯ ಗಂಗರಸರಾದರಣೆಯೆಲ್ಲಿ—
ರಾಷ್ಟ್ರಕೂಟರ ಹೊಯ್ಸಳರ ಪೋಷಣೆಯುದೆಲ್ಲಿ ?
ಯದುನೃಪರ ಕಾಪಿನಲಿ ತೋರು ನೀನಿಂದು !
ಇದೊ ನೋಡು ಕನ್ನಡಿಗರೊಂದುಗೂಡುತಲಿ
ಚೆದರಿಸುತೆ ಬರುತಿಹರು ನಿನ್ನ ರಿಪುಗಳನು !
ಕದನವಡಗಿತು ಮಾತೆ ನಲಿದು ಮೆರೆ ವಿಖ್ಯಾತೆ,
ಒದಗಲೆಂದಿಗು ವಿಜಯ ನಿನಗೆ ಸುಪ್ರೀತೆ!
ಪಾಡು, ನಾಡಿನ ಕೀರ್ತಿ ಪಲ್ಲವಿಯನೊಲಿದು
ಪಾಡುವೆವು ನಿನ್ನೊಡನೆ ಕರ್ಣಾಟ ಜನನೀ !
ಬೇಡುವೆವು ನಿನ್ನೊಂದು ಬಿಕ್ಕೆಯನು ದೇಶದಲಿ
ನೀಡು ಶಾಂತಿಯ ಬಲವನೆಮಗೆ ಬಾಳ್ಕೆಯಲಿ !
ಮುನ್ನ ಜೈನರ ಸೇವೆ, ವೀರಶೈವರ ಸೇವೆ,
ಚೆನ್ನೆ ಪಾರ್ವರು ನಿನ್ನ ಸೇವೆಗೈದಿಹರು !
ಇನ್ನಾವ ಭಕುತರನು ನೀ ಮೆಚ್ಚಲೆಳಸುತಿಹೆ,
ನಿನ್ನ ಮನವನು ತಿಳಿವೆವೆಂತು ವಾಗ್ದೇವಿ !

